ಜಯತು ಭಗವಾ೯

ಬಾಲಸರಸ್ವತೀ ಗ್ರಂಥಮಾಲಾ

---

# ಚಿತ್ರಗುಪ್ತನ ೧ನೆಯ ದಪ್ತರ

ೞ

# ನರಬಲಿ



ವಿದ್ವಾ೯

**ವಿದ್ಯಾಭೂಷಣ ಬಾಲಸರಸ್ವತೀ ನರಹರಿಶರ್ಮರಿಂದ**

ವಿರಚಿತವಾದುದು

---

ಬೆಂಗಳೂರು

ವಿ. ನೈಡ್ ಅಂಡ್ ಕಂಪೆನಿ, ಪವರ್ ಪ್ರೆಸ್ಸಿನಲ್ಲಿ

ಮುದ್ರಿಸಲ್ಪಟ್ಟಿತು.

Price 6 As.] **1931** [ಬೆಲೆ ೬ ಆಣೆ.

Publisher,
**G. Siddappa, Photographer,**
BANGALORE CITY.

---

ಸೋಲ್ ಏಜಂಟರು,
**ಕೆ. ಎ. ಚೌರಪ್ಪ ಅಂಡ್ ಸನ್ಸ್,**
**ಪುಸ್ತಕ ವ್ಯಾಪಾರಿಗಳು,**
ಅವೆನ್ಯೂ ರೋಡ್, ಬೆಂಗಳೂರು ಸಿಟಿ.



ಶ್ರೀಯುತ ವಿದ್ವಾನ್ ವಿದ್ಯಾಭೂಷಣ
ಬಾಲಸರಸ್ವತೀ.

# ವಿ ಜ್ಞಾ ಪ ನೆ.

---

ನರಬಲಿಯೆಂಬುದು ಸಾಮಾನ್ಯವಾದ ಪತ್ತೇದಾರಿಯ ಉಪನ್ಯಾಸವು. ಇದರಲ್ಲಿ ಕರ್ಮಕ್ಕೆ ತಕ್ಕ ಫಲವು ವಿವರಿಸಲ್ಪಟ್ಟಿರುವುದು. ಜನರು ಒಳ್ಳೆಯತನದಿಂದಿರುವುದಾದರೆ ಅವರಿಗೆ ಇತರರು ಒಳ್ಳೆಯದನ್ನೇ ಮಾಡುವರು; ಕೆಟ್ಟವರಿಗೆ ಕಿಡುಕೇ ಪ್ರತಿಫಲವು. ಆದುದರಿಂದ ಯಶೋವಂತರಾಗಿ ಬಾಳಬೇಕೆಂದಿರುವ ಜನರು ಇತರ ಜನರೆಂಬ ಕನ್ನಡಿಯಲ್ಲಿ ತಮ್ಮ ತಮ್ಮ ಸ್ವರೂಪವನ್ನು ನೋಡಿಕೊಂಡು, ಹಲ್ಲುಗಳ ಮಧ್ಯದಲ್ಲಿ ಸಂಚರಿಸುವ ನಾಲಿಗೆಯಂತೆ ಲೋಕದಲ್ಲಿ ಬಲು ಜಾಗರೂಕತೆಯಿಂದ ವರ್ತಿಸಬೇಕೆಂಬುದೇ ನನ್ನ ವಿನಯಪೂರ್ವಕ ಪ್ರಾರ್ಥನೆ.

೨೩—೧೦—೧೯೩೧,
ಮೈಸೂರು.

ದೇಶಭಾಷಾಭಿಮಾನಿವಶಂವದ,
“ ಬಾಲಸರಸ್ವತೀ.”



ಜಯತು ಭಗವಾ೯

**ಬಾಲಸರಸ್ವತೀ ಗ್ರಂಥಮಾಲಾ**

---

# ಚಿತ್ರಗುಪ್ತನ ೧ನೆಯ ದಪ್ತರ

# ೩

# ನ ರ ಬ ಲಿ

## ಪ್ರಥಮ ಖಂಡ

---

### ಒಂದನೆಯ ಅಧ್ಯಾಯ

(ಧೀರೇಂದ್ರನ ಹೇಳಿಕೆ)

ಉಸಿರು ಬಿಡುವುದಕ್ಕೂ ಅವಕಾಶವಿಲ್ಲವೇ! ಕಾಲಕಾಲಕ್ಕೆ ಹಿತವಾದ ಭೋಜನ, ಸುಖವಾದ ನಿದ್ರೆ, ಹೆಂಡಿತಿ ಮಕ್ಕಳೊಡನೆ ವಿಶ್ವಾಸದ ಸಂಭಾಷಣೆ, ಇವೇ ಮೊದಲಾದ ಗೃಹಸ್ಥಧರ್ಮಕ್ಕೆ ಒಂದೇ ಸಲ ತರ್ಪಣಕೊಟ್ಟುದಾಯಿತು. ಕೆಲಸವಾದರೋ ಒಂದರ ಮೇಲೊಂದು ಬಂದೇ ಬರುತ್ತಿರುವುದು. ಎಷ್ಟು ಮಾಡಿದರೂ ಮನಸ್ಸಿಗೆ ಕೆಲಸವು ಮುಗಿಯಿತೆಂಬ ಸಂತೋಷವೇ ಇಲ್ಲ. ಕೆಲಸವು ದಾಸಯ್ಯನ ಹೆಣವಾಗುತ್ತಿದ್ದರೆ ನಮಗೆ ಉಳಿಬಾಳೆಂದಿಗೆ?

ಅಕಟಕಟಾ! ಭೂದೇವಿಗೆ ಒಂದು ದಿನವಾದರೂ ಪಾಪಿಗಳ ಪಾಪಕಾರ್ಯದಿಂದ ವಿಮೋಚನೆಯೆಂಬುದೇ ಇಲ್ಲವಲ್ಲಾ! ವಸುಂಧರೆ! ನಿನ್ನ ಪವಿತ್ರವಾದ ಅಂಗಾಂಗಗಳನ್ನು ಅಪವಿತ್ರವನ್ನಾಗಿ ಮಾಡಲೋಸುಗವೇ ನರಪಿಶಾಚರು ನಿನ್ನಲ್ಲಿ ಜನ್ಮಗ್ರಹಣ ಮಾಡಿರುವಂತಿದೆ. ಅವರ ಪೈಶಾಚಿಕ ವೃತ್ತಿಯಿಂದ ಜಗವೆಲ್ಲವೂ

---

**ವಿದ್ವಾ೯ ವಿದ್ಯಾಭೂಷಣ ಬಾಲಸರಸ್ವತಿಯವರಿಂದ ವಿರಚಿತವಾದುದು.**

ತುಂಬಿ ಹೋಗುತ್ತಿರುವುದು. ನಾವಾದರೋ ಈ ಹಾಳ ಹೊಟ್ಟೆಗಾಗಿ ಬೆಳಗಿನಿಂದ ರಾತ್ರಿಯ ವರೆಗೂ ಸತ್ತು ಸತ್ತು ಸುಣ್ಣವಾಗುವುದಾದರೂ ಒಂದು ಹೊತ್ತಿಗೆ ಕೂಡ ಹೊಟ್ಟೆಗೆ ಮಾರ್ಗವಿಲ್ಲದೇ ಇರುವುದು. ಹೀಗಾದ ಮೇಲೆ ನಾವು ಬದುಕಿ ಫಲವೇನು? ನಾವು ಈ ಕೆಲಸದಿಂದ ಬದುಕಿರಬೇಕೆನ್ನುವುದಾದರೆ, ಇಂದು ಕಾಶಿಗೆ ಹೋಗಬೇಕು, ನಾಳೆ ರಾಮೇಶ್ವರಕ್ಕೆ ಹೋಗಬೇಕು. ಒಂದು ದಿನ ಬೊಂಬಾಯಿ ಯಾದರೆ, ಮತ್ತೊಂದು ದಿನ ಮದರಾಸು. ಹೀಗೆ ರಾತ್ರಿ ಹಗಲೆಂಬುದಿಲ್ಲದೆ ಸುತ್ತಿ ದರೂ, ಒಂದು ಹೊತ್ತಿಗೆ ಇದ್ದರೆ ಮತ್ತೊಂದು ಹೊತ್ತಿಗೆ ಇಲ್ಲ. ಇಷ್ಟು ಕಷ್ಟ ಪಟ್ಟಾದರೂ ನಾವು ಬದುಕಿರಬೇಕೇ ಹೊರತು ಸಾಯಲಾಗುವುದಿಲ್ಲ. ವಿಶ್ವವಿಧಾ ತನ ವಿಚಿತ್ರವಾದ ಮಹಿಮೆಯನ್ನು ಏನೆಂದು ವರ್ಣಿಸಲಿ?

ನಾನೊಬ್ಬ ಅಲ್ಪವೇತನವುಳ್ಳ ಪತ್ತೇದಾರನು. ಈ ಕೆಲಸವು ನನಗೆಲ್ಲಿ ಕಾದಿದ್ದಿತೋ ಕಾಣೆನು! ನಾನು ಈ ಕೆಲಸವನ್ನು ಒಪ್ಪಿಕೊಂಡಂದಿನಿಂದಲೂ ಮನಸ್ಸಿಗೆ ಶಾಂತಿಯೆಂಬುದೇ ಇಲ್ಲ. ಎಲ್ಲಿ ಆರು ಆರನ್ನು ಕೊಲೆ ಮಾಡಿದರೋ, ಎಲ್ಲಿ ಆರು ಆರ ದ್ರವ್ಯವನ್ನು ಅಪಹರಿಸಿ ಪಲಾಯನ ಮಾಡಿದರೋ, ಎಲ್ಲಿ ಆರು ಆವ ಪತಿವ್ರತೆಯ ಪಾತಿವ್ರತ್ಯಕ್ಕೆ ಭಂಗವನ್ನುಂಟುಮಾಡಿದರೊ, ಎಲ್ಲಿ ಆರು ಸರ ಕಾರಕ್ಕೆ ವಿರುದ್ಧವಾಗಿ ಆಚರಿಸಿದರೋ ಎಂಬುದಾಗಿ ಹುಡುಕಿಹುಡುಕಿ ನನ್ನ ಜನ್ಮವೇ ತೇದು ಹೋಗಿರುವುದು. ನಾನು ಈ ಕೆಲಸಕ್ಕೆ ಸೇರಿದಾಗಿನಿಂದಲೂ ಹೆಂಡಿತಿ, ಮಕ್ಕಳು, ಬಂಧುಬಾಂಧವರು ಮುಂತಾದವರನ್ನು ಕಣ್ಣತುಂಬಾ ನೋಡಿ ಮನದಣಿಯೆ ಹಿಗ್ಗಿ, ಬಾಯ ತುಂಬಾ ಮಾತನಾಡಿಸಿದ ಪ್ರಾಣಿಯೇ ಅಲ್ಲ.

ದುಃಖಿಗಳ ದುಃಖಕ್ಕೆ ಪಾರವೆಲ್ಲಿಯದು? ಹಾ, ಸುಟ್ಟ ಮನವೇ! ಹಣ ಕಂಡರೆ ನಿನಗೆ ಸಲ್ಲದ ಆಸೆಯಾಗುವುದು. ಹಣದ ಸಂಪಾದನೆಗೆ ಬೇಕಾದ ಗುಣವು ನಿನ್ನಲ್ಲಿ ಎಲ್ಲಿರುವುದು? ಒಂದು ಹಿಡಿ ಅಕ್ಕಿಗಾಗಿ, ನೀನು ಆರ ಮನೆಯ ಬಾಗಿಲಲ್ಲಿ ಯಾದರೂ ಬೇಜಾರಿಲ್ಲದೆ ಕಾದುಬಿದ್ದಿರುವೆ. ಜನಗಳು ನನ್ನ ವಿಷಯದಲ್ಲಿ ಬುದ್ಧಿ ಶಾಲಿಯೆಂದೂ, ಕಾರ್ಯದಕ್ಷನೆಂದೂ, ಗುಣಾಢ್ಯನೆಂದೂ, ಇನ್ನೂ ಏನೇನನ್ನೋ ಹೇಳಿಕೊಳ್ಳುವರು. ಅದನ್ನು ನಾನೂ ಕಿವಿಯಾರೆ ಕೇಳಿರುವೆನು. ಇದರಿಂದಲೇ ಅಲ್ಲವೆ ನನಗೆ ಇಷ್ಟು ದುರ್ದಶೆ! ಬುದ್ಧಿಗೂ, ಕೆಲಸಕ್ಕೂ, ಗುಣಕ್ಕೂ, ಹಣದ ಸಂಪಾದನೆಗೂ ಅದಾವ ಸಂಬಂಧವಿರುವುದು? ಹಣದ ಸಂಪಾದನೆಗೆ ಹೆಚ್ಚಿನ ಅದೃಷ್ಟವೇ ಇರಬೇಕು. ನನಗೆ ಅದೇ ಇಲ್ಲದಿರುವಾಗ, ನಾನು ಇತರರನ್ನು ನಿಂದಿಸಿ ಫಲವೇನು? ನಾನಾದರೋ ಕೆಲಸಮಾಡುವುದಕ್ಕಾಗಿಯೇ ಹುಟ್ಟಿರು ವೆನು. ಆದುದರಿಂದ ನಾನು ಈ ಜನ್ಮದಲ್ಲಿ ಕೆಲಸಮಾಡಿಬಿಡುವೆನು. ಫಲಾಫಲದ ಆಲೋಚನೆಯು ನನಗೇಕೆ?

ಮೊನ್ನೆಯ ದಿನವೇ ಒಂದು ಆಶ್ಚರ್ಯಕರವಾದ ಕೊಲೆಯ ವ್ಯವಹಾರವನ್ನು ನ್ಯಾಯಸ್ಥಾನದಲ್ಲಿ ಅರಿಕೆಮಾಡಿಕೊಂಡೆನು. ನನ್ನ ಸಲಹೆಯಂತೆಯೇ ಕೆಲಸವೆಲ್ಲವೂ ನಡೆಯಿತು. ಎಲ್ಲರೂ ನನ್ನ ಬುದ್ಧಿಶಕ್ತಿಯನ್ನು ಕುರಿತು ಪರಿಪರಿಯಾಗಿ ಕೊಂಡಾಡಿದರು. ನಾನೂ ನನ್ನ ಮನದಲ್ಲಿಯೇ ಬಲು ಸಂತೋಷಪಟ್ಟುಕೊಂಡೆನು. ಬಳಿಕ ಒಂದೆರಡು ದಿನಗಳಾದರೂ ವಿಶ್ರಾಂತಿಸುಖವನ್ನು ಆವ ಬಾಧೆಯೂ ಇಲ್ಲದೆ ಅನುಭವಿಸುವೆನೆಂಬ ಸಂತೋಷದಿಂದ ಮನೆಯ ಕಡೆಗೆ ತೆರಳಿದೆನು.

ನನ್ನ ಹೆಂಡತಿಯು, ನಾನು ಮನೆಗೆ ಬರುವುದನ್ನೇ ಇದಿರು ನೋಡುತ್ತಿದ್ದು, ನಾನು ಮನೆಯೊಳಗೆ ಬಂದ ಕೂಡಲೆ ಒಂದು ಪತ್ರವನ್ನು ನನ್ನ ಕೈಗೆ ಕೊಟ್ಟಳು. ನಾನು ಆ ಪತ್ರವನ್ನು ಬಿಚ್ಚಿ ನೋಡಿದೆನು. ಅದರಲ್ಲಿ, "ಕೂಡಲೆಯೇ ಹೊರಟು ಬರಬೇಕು. ಕಾಲಹರಣಕ್ಕೆ ಅವಕಾಶವಿಲ್ಲ. ಕೆಲಸವಾದರೋ ತಲೆಯನ್ನು ತಿನ್ನುವಂತಿದೆ. ನೀನು ಆವ ಕೆಲಸವಿದ್ದರೂ ಬಿಟ್ಟು ಸೂತ್ರಸ್ಥಾನ (ಪತ್ತೇದಾರರ ಪ್ರಧಾನವಾದ ಅಧಿಕಾರ ಸ್ಥಾನ)ಕ್ಕೆ ಬಂದು ನನ್ನನ್ನು ಅಗತ್ಯವಾಗಿಯೂ ನೋಡಬೇಕು" ಎಂದು ಪ್ರಧಾನಾಧಿಕಾರಿಗಳು ಬರೆದಿದ್ದರು. ನಾನು ಮನೆಯಲ್ಲಿ ಒಂದು ಕ್ಷಣವೂ ನಿಲ್ಲದೆ ಸೂತ್ರಸ್ಥಾನಕ್ಕೆ ತೆರಳಿದೆನು.

ನಾನು ಮನೆಗೆ ಬಂದುದನ್ನು ನೋಡಿ, ನನ್ನ ಹೆಂಡತಿಯು ಎಷ್ಟೋ ಸಂತೋಷವಾಗಿದ್ದಳು. ನಾನು ಬಂದ ಕೂಡಲೆ ಹಿಂದಿರುಗಿ ಹೊರಟುಹೋದುದನ್ನು ನೋಡಿ ಆಕೆಗೆ ಎಷ್ಟು ವ್ಯಸನವುಂಟಾಗಿರಬಹುದೋ ಅದು ವರ್ಣಿಸಲಸದಳವು. ಪರಾಧೀನರಾದ ನಾವು ಏನ ಮಾಡುವುದಕ್ಕಾದೀತು ? ಒಂದು ಕಡೆ ಸರಕಾರದವರು ಕೆಲಸಕ್ಕೆ ಎಳೆವರು ; ಮತ್ತೊಂದು ಕಡೆ ಹೆಂಡತಿಯು ಸಂಸಾರದ ಕಡೆಗೆ ಎಳೆವಳು. ಇಂತಹ ಸಂಕಟದಲ್ಲಿ ಉಭಯ ಸಮ್ಮತವಾಗಿ ನಾನು ಹೇಗೆ ವರ್ತಿಸ ಬೇಕೋ ಅದು ನನಗೆ ಗೊತ್ತಾಗಲೊಲ್ಲದು. ಬಲ್ಲವರಾರಾದರೂ ಇರುವುದಾದರೆ ದಯೆಯಿಟ್ಟು ತಿಳಿಸಲಿ.

ನಾನು ಸೂತ್ರಸ್ಥಾನಕ್ಕೆ ತೆರಳಿದೆನು. ದಾರಿಯುದ್ದಕ್ಕೂ ನಾನು ಹೆಂಡತಿಯ ಗುಣಗಳನ್ನು ಕುರಿತು ಆಲೋಚಿಸಿದೆನು.—"ಪ್ರಿಯೇ! ನೀನು ಪತ್ತೇದಾರನ ಹೆಂಡತಿಯಾಗಿ ಎಂತಹ ಕಷ್ಟವನ್ನು ಅನುಭವಿಸುತ್ತಿರುವೆ! ಪೂರ್ವಜನ್ಮದಲ್ಲಿ ಎಂತಹ ಪಾಪಮಾಡಿ ನೀನು ಈಗ ನನ್ನ ಹೆಂಡತಿಯಾದೆ! ನಾನು ಬರುವುದು ಹೊತ್ತಾದರೆ ನನ್ನ ವಿಷಯದಲ್ಲಿ ನೀನು ಎಷ್ಟು ವ್ಯಸನ ಪಡುವೆ! ನಾನು ಬಿಸಿಲಿನಲ್ಲಿ ದಣಿದು ಮನೆಗೆ ಬಂದರೆ, ನನ್ನನ್ನು ನೀನು ಎಷ್ಟು ವಿಧವಾಗಿ ಆದರಿಸುವೆ! ನನಗೆ ಕಷ್ಟವಾಯಿತೆಂದು ನೀನು ಕೇಳಿದ ಕೂಡಲೆ, ನಿನ್ನ ವ್ಯಸನಕ್ಕೆ

ತುದಿ ಮೊದಲುಂಟೆ? ನನ್ನ ಬಾಯಿಂದ ಆವಾಗಲಾದರೂ ಸವಿನುಡಿ ಬರುವುದಾದರೆ, ಅದನ್ನು ನೀನು ಮೈಯೆಲ್ಲ ಕಿವಿಯಾಗಿ ಮಾಡಿಕೊಂಡು ಕೇಳುವೆಯಲ್ಲ! ಇಂತಹ ನಿನ್ನ ಪ್ರೇಮಾತಿಶಯಕ್ಕೆ ಪ್ರತಿಯಾಗಿ ಮಂದ ಭಾಗ್ಯನಾದ ನಾನು ಏನ ಮಾಡಬಲ್ಲೆನು?"

ನಾನು ಈ ರೀತಿಯಲ್ಲಿ ಆಲೋಚಿಸುತ್ತಾ ದಾರಿ ನಡೆದು ನಮ್ಮ ದೊಡ್ಡ ಅಧಿಕಾರಿಗಳ ಇದಿರಿಗೆ ಹೋಗಿ ನಿಂತೆನು. ಅವರು ಒಂದು ಕಾಗದವನ್ನು ನನ್ನ ಕೈಗೆ ಕೊಟ್ಟರು. ಅದರಲ್ಲಿ **ನರಬಲಿ! ನರಬಲಿ!!** ಎಂದು ಬರೆದಿದ್ದಿತು. ನಾನು ಅದನ್ನು ಓದಿದ ಕೂಡಲೆ, ನಮ್ಮ ಅಧಿಕಾರಿಗಳು ನನ್ನನ್ನು ಕುರಿತು—ನೀನು ಈ ಕಾರ್ಯವನ್ನು ಕೈಕೊಂಡು ಅಪರಾಧಿಗಳನ್ನು ಶಿಕ್ಷಿಸುವುದಾದರೆ, ನಿನಗೆ ಗಣ್ಯವಾದ ಪದವಿಯನ್ನು ದಯೆಪಾಲಿಸುವಂತೆ ಸರ್ಕಾರಕ್ಕೆ ಬರೆದುಕೊಳ್ಳುವೆನು, ಎಂದು ಹೇಳಿದರು.

ನಮ್ಮ ಅಧಿಕಾರಿಗಳು ಗಣ್ಯವಾದ ಪದವಿಯೆಂದ ಮಾತ್ರಕ್ಕೆ ನನ್ನ ತಲೆ ತಿರುಗಿತು. ಆಶೆಯೆನ್ನುವುದರಲ್ಲಿ ಏನು ಮೋಹಶಕ್ತಿಯಿರುವುದೋ, ಆರು ಬಲ್ಲರು? ನಮ್ಮ ಅಧಿಕಾರಿಗಳು ಇದಕ್ಕೆ ಮೊದಲು ಎಷ್ಟೋ ಸಲ ಕಾರ್ಯನಿರ್ವಾಹಕ್ಕೋಸ್ಕರ ವಿಧವಿಧವಾದ ಆಶೆಯನ್ನು ತೋರಿಸಿದರು. ಆವುದೂ ಫಲಿಸಲಿಲ್ಲ. ಈಗಲೂ ಆಶೆಯನ್ನು ತೋರಿಸುತ್ತಿರುವರು. ಮುಂದಿನ ಫಲವು ಗೊತ್ತೇ ಇರುವುದಾದರೂ ಒಳ್ಳೆಯದು ಆಗುವುದೋ ಏನೋ ಎಂಬ ದುರಾಶೆಯು ಮಾತ್ರ ನನ್ನನ್ನು ಬಿಡಲೊಲ್ಲದು. ಆಶೆಯೇ ನನಗೆ ಪ್ರಾಣವು; ಆಶೆಯೇ ನನಗೆ ತ್ರಾಣವು; ಆಶೆಯೇ ನನಗೆ ಜೀವನ ಸರ್ವಸ್ವವು. ಆಶೆಯನ್ನು ಮಾತ್ರ ನಾನೆಂದಿಗೂ ಬಿಡಲಾಗುವುದಿಲ್ಲ. ಈ ಆಶೆಯ ಬಲದಿಂದಲೇ ನಾನು ಆವ ಕೆಲಸವನ್ನಾದರೂ ಮಾಡಬಲ್ಲವನಾಗಿದ್ದೆನು.

ನಾನು ದೊಡ್ಡ ಅಧಿಕಾರಿಗಳಿಂದ ಅಪ್ಪಣೆಯನ್ನು ತೆಗೆದುಕೊಂಡು ಆವ ಸ್ಥಳದಲ್ಲಿ ಕೃತ್ಯ ನಡೆಯಿತೋ ಅಲ್ಲಿಗೆ ಹೋಗಿ ಕಾಲಿಟ್ಟೆನು.

ರಾಮರಾಜ ಮೊಹಲ್ಲೆಗೆ ಸೇರಿದ ಭುವನೇಶ್ವರೀ ಮಾರ್ಗದಲ್ಲಿ ನರಬಲಿಯು ನಡೆಯಿತು. ನಾನು ಅಲ್ಲಿಗೆ ಹೋಗುವಾಗ ನನ್ನ ಜತೆಯಲ್ಲಿ ಅಲ್ಲಿಗೆ ಸೇರಿದ ಒಬ್ಬ ಯಾಮಿಕನು ಬಂದಿದ್ದನು. ದಾರಿಯುದ್ದಕ್ಕೂ ನಾನು ಆತನೊಡನೆ ಆ ಮಾತು ಈ ಮಾತು ಆಡಿಕೊಂಡು ಹೊರಡುತ್ತಿರುವಾಗ—ಮಾರ! ನರಬಲಿಯಾದ ಸ್ಥಳಕ್ಕೆ ನೀನು ಹೋಗಿದ್ದೆಯಲ್ಲವೇ? ನಿನಗೆ ಎಷ್ಟರ ಮಟ್ಟಿಗೆ ಗೊತ್ತಿದೆ? ಹೇಳು ನೋಡೋಣ, ಎಂದು ಕೇಳಿದೆನು.

ಮಾರ—ನಿನ್ನೆಯ ರಾತ್ರಿ ಸುಮಾರು ೧೧ ಗಂಟೆಯ ಹೊತ್ತಿನಲ್ಲಿ ನಾನು ಈ ಭುವನೇಶ್ವರೀ ಮಾರ್ಗದಲ್ಲಿ ಪಹರೆಕೊಡುತ್ತಿದ್ದೆನು. ಆಗ ಜೋರೋ ಎಂದು ಮಳೆಯು ಸುರಿಯುತ್ತಿತ್ತು. ದಾರಿಯಲ್ಲಿ ಒಬ್ಬ ಮನಷ್ಯನೂ ಕಾಣಿಸುತ್ತಿರಲಿಲ್ಲ. ಎಲ್ಲಾ ಮನೆಯವರೂ ತಮ್ಮ ತಮ್ಮ ಮನೆಗಳ ಬಾಗಿಲನ್ನು ಹಾಕಿಕೊಂಡು ಮಲ ಗಿದ್ದರು. ನಾನೊಬ್ಬನು ಮಟ್ಟಿಗೆ ಕೆಲಸದ ಬಾಯಿಗೆ ಎಲ್ಲಿ ಮಣ್ಣು ಬೀಳು ವುದೋ ಎಂದು ಭಯದಿಂದ ಮಳೆಯಲ್ಲಿಯೂ ಪಹರೆಕೊಡುತ್ತಿದ್ದೆನು.

ಆ ಸಂದರ್ಭದಲ್ಲಿ ಮಾರನ ಅಪ್ರಕೃತವಾದ ಮಾತುಗಳು ನನಗೆ ಬೇಕಾಗಿರ ಲಿಲ್ಲವಾಗಿ, ನಾನು ಮಾರನನ್ನು ಕುರಿತು—ಮಾರ! ಕೊಲೆ ಆದ ವಿಷಯದಲ್ಲಿ ನೀನು ಕೇಳಿರುವುದು ಹೇಗೆ, ಎಂದು ಕೇಳಿದುದಕ್ಕೆ, ಮಾರನು—ನಾನು ಅದನ್ನೇ ಹೇಳುವುದಕ್ಕಿರುವೆನು. ತಾವು ದಯೆಪಾಲಿಸಿ ಕೇಳಬೇಕು. ನಾನು ಮಳೆ ಯಲ್ಲಿಯೇ ಪಹರೆಕೊಡಲಾರಂಭಿಸಿದೆನು. ಆ ಸಮಯದಲ್ಲಿ ಆರೋ ಹೆಂಗುಸು— ಅಯ್ಯೋ! ಅಪ್ಪಾ! ನಾನು ಸಾಯುವೆನು ನನ್ನನ್ನು ಕೊಂದರಲ್ಲಪ್ಪಾ! ನನ್ನನ್ನು ಆರೂ ರಕ್ಷಿಸುವವರಿಲ್ಲವೇ! ಅಯ್ಯೋ! ಅಪ್ಪಾ! ಎಂದು ಅರಚಿಕೊಂಡಳು. ಆ ಶಬ್ದವು ಹತ್ತಿರದಲ್ಲಿಯೇ ಕೇಳಿ ಬಂದಿತು. ಆ ಕೂಡಲೆ ನಾನು ಧ್ವನಿ ಕೇಳಿ ಬಂದ ಸ್ಥಳಕ್ಕೆ ಓಡಿದೆನು.

ಮಾರನು ಇಷ್ಟು ಹೇಳಿ ಸುಮ್ಮನಾದನು. ನಾನು ಕೊಂಚ ಹೊತ್ತು ಏನೇನೋ ಆಲೋಚನೆ ಮಾಡತೊಡಗಿದೆನು.

---

## ಎರಡನೆಯ ಅಧ್ಯಾಯ

ನಾನು ಈ ರೀತಿಯಲ್ಲಿ ಮಾತನಾಡುತ್ತಾ ಭುವನೇಶ್ವರೀ ಮಾರ್ಗಕ್ಕೆ ಬಂದೆನು. ಭುವನೇಶ್ವರಿಯೆಂಬ ಕಾಳಿಯ ದೇವಸ್ಥಾನವು ಅಲ್ಲಿದ್ದುದರಿಂದ ಆ ಬೀದಿಗೆ ಭುವನೇಶ್ವರೀ ಮಾರ್ಗವೆಂದು ಹೆಸರಾಗಿದ್ದಿತು. ನಾವಿಬ್ಬರೂ ಅಲ್ಲಿಗೆ ಬರುತ್ತಲೆ, ಮಾರನು ಮತ್ತೆ ಹೇಳತೊಡಗಿದನು:—

"ಭುವನೇಶ್ವರೀ ದೇವಸ್ಥಾನದ ಇದಿರಿಗೆ ಒಬ್ಬ ಹೆಂಗುಸು ನಡುಬೀದಿ ಯಲ್ಲಿ ಬಿದ್ದಿದ್ದಳು. ರಕ್ತವು ಸುತ್ತು ಮುತ್ತೂ ಚೆಲ್ಲಾಡಿದ್ದಿತು. ಹೆಂಗುಸಿನ ಸೀರೆಯೆಲ್ಲವೂ ರಕ್ತದಲ್ಲಿ ತೋಯಿದು ಒದ್ದೆ ಮುದ್ದೆಯಾಗಿ ಹೋಗಿದ್ದಿತು. ಆಕೆಯ ಮುಖದಲ್ಲಿ, ಎದೆಯಲ್ಲಿ, ಹೊಟ್ಟೆಯಲ್ಲಿ ಈ ಮೂರು ಸ್ಥಳಗಳಲ್ಲಿಯೂ ಮಚ್ಚಿನ ಪೆಟ್ಟಿನಿಂದುಂಟಾದ **ದೊಡ್ಡ ದೊಡ್ಡ** ಗಾಯಗಳು ಕಾಣಬರುತ್ತಿದ್ದುವು.

ಆ ಮೂರು ಸ್ಥಳದಿಂದಲೂ ರಕ್ತದ ಪ್ರವಾಹವು ಹರಿದು ಬಂದು ಮಳೆಯ ನೀರಿನ ಜತೆಯಲ್ಲಿ ಸೇರಿ ಎಲ್ಲಿಯೋ ಮಾಯವಾಗುತ್ತಿದ್ದಿತು.''

ನಾನು—ನೀನು ಅಲ್ಲಿಗೆ ಹೋದಾಗ ಕೊಲೆ ಆದ ಹೆಂಗುಸು ಬದುಕಿದ್ದಳೋ ?

ಮಾರ—ಇಲ್ಲ. ಆಕೆಯು ಬದುಕಿರಬಹುದೆಂದು ತಿಳಿದು, ನಾನು ಆಕೆಯ ಮೂಗಿನ ಹತ್ತಿರ ಕೈಯಿಟ್ಟು ನೋಡಿದೆನು. ಉಸಿರಾಡುತ್ತಿರಲಿಲ್ಲ.

ನಾನು—ಆ ಮೇಲೆ ನೀನು ಮಾಡಿದುದು ?

ಮಾರ—ಆಗ ಏನ ಮಾಡುವುದಕ್ಕೂ ನನಗೆ ದಿಕ್ಕೇ ತೋರದೆ ಕೊಂಚ ಹೊತ್ತು ಸುಮ್ಮನಿದ್ದುಬಿಟ್ಟೆನು. ಅಷ್ಟು ಹೊತ್ತಿಗೆ ಆವನೋ ಒಬ್ಬನು—ಯಾಮಿಕನೇ! ಯಾಮಿಕನೇ! ಕೊಲೆ! ಕೊಲೆ! ಎಂದು ಗಟ್ಟಿಯಾಗಿ ಕೂಗಿಕೊಳ್ಳುತ್ತಾ ಅತ್ತಕಡೆಗೆ ಓಡಿಬರುತ್ತಿದ್ದನು. ನಾನು ದಾರಿಯಲ್ಲಿ ನಿಂತಿದ್ದರೂ ಅವನು ಭಯದಿಂದ ಓಡಿಬರುವ ಸಂಭ್ರಮದಲ್ಲಿ ನನ್ನನ್ನು ನೋಡದೆ ಯಾಮಿಕನನ್ನು ಕರೆದುಕೊಂಡು ಬರಲು ಓಡಿಹೋಗುತ್ತಿದ್ದನು. ಅವನು ನನ್ನನ್ನೇ ಹುಡುಕಿಕೊಂಡು ಹೋಗುತ್ತಿರುವನೆಂದು ತಿಳಿದು ನಾನು ಅವನನ್ನು ಕೂಗಿ ಬರಮಾಡಿಕೊಂಡೆನು.

ನಾನು—ಆತನನ್ನು ಕರೆದು ಮಾತನಾಡಿದುದೇನು ?

ಮಾರ—ನಾನು ಏನ ಮಾತನಾಡುವುದಕ್ಕೂ ಆಗಲಿಲ್ಲ. ಆತನು ನನ್ನನ್ನು ನೋಡಿದ ಕೂಡಲೆ—ಯಾಮಿಕರೇ! ಕೊಲೆ ಆಗಿಹೋಗಿದೆ! ಕೊಲೆ ಆಗಿಹೋಗಿದೆ, ದೇವಸ್ಥಾನದೊಳಗೆ ಬರೋಣವಾಗಲಿ. ನಮ್ಮ ಯಜಮಾನರನ್ನು ಆರೋ ಕೊಲೆ ಮಾಡಿರುವರು. ನಮ್ಮ ಯಜಮಾನರ ತಲೆಯನ್ನು ದೇವತೆಗೆ ಬಲಿ ಕೊಟ್ಟಿರುವರು. ನರಬಲಿ! ನರಬಲಿ!! ಎಂದು ಹೇಳಿ, ನನ್ನನ್ನು ಕೈಹಿಡಿದು ಕರೆದುಕೊಂಡು ಹೋಗಲು ನನ್ನ ಹತ್ತಿರಕ್ಕೆ ಬಂದನು. ಬಂದ ಕೂಡಲೆ ನನ್ನ ಹತ್ತಿರ ಬಿದ್ದಿದ್ದ ಹೆಂಗುಸಿನ ಶವವನ್ನು ನೋಡಿ ಎದೆಯೊಡೆದವನಾಗಿ—ಇದೇನು ಕೊಲೆ ಮೇಲೆ ಕೊಲೆ! ಎಂದು ಹೇಳಿಕೊಂಡು ದೂರ ಹೋಗಿ ಅವಾಕ್ಕಾಗಿ ನಿಂತುಕೊಂಡನು.

ನಾನು—ದೂರ ನಿಂತು ಅವನು ಮಾಡಿದುದೇನು ?

ಮಾರ—ಕೊಲೆ ಮಾಡಿದವರಾರು ? ಏತಕ್ಕೆ ಮಾಡಿದರು ? ಎಂದು ಮುಂತಾಗಿ ಪ್ರಶ್ನೆಮಾಡಲಾರಂಭಿಸಿದನು. ನಾನು ಆತನನ್ನು ಕುರಿತು—ಅದನ್ನು

ಕಟ್ಟಿಕೊಂಡು ನಿನಗೇನು? ನಿನ್ನ ಕೆಲಸವೇನಿದೆ ಹೇಳು ಎಂದು ಕೇಳಿದುದಕ್ಕೆ ಆತನು-ನಮ್ಮ ಯಜಮಾನನನ್ನು ಆರೋ ಕೊಲೆ ಮಾಡಿ ದೇವತೆಗೆ ಬಲಿ ಕೊಟ್ಟಿರುವರು. ಯಾಮಿಕರೇ! ಎಂದು ಭಯದಿಂದ ತೊದಲು ನುಡಿಗಳನ್ನಾಡಿದನು. ನಾನು ಆ ಕೂಡಲೆ ಸೀಟಿಯನ್ನೂದಿದೆನು. ಮತ್ತೊಬ್ಬನು ಅಲ್ಲಿಗೆ ಬಂದು ಸೇರಿದನು. ನಾನು ಆತನನ್ನು ಹೆಂಗುಸಿನ ಶವದ ಹತ್ತಿರ ಇರುವಂತೆ ಹೇಳಿ, ಭುವನೇಶ್ವರಿಯ ಗುಡಿಯೊಳಗೆ ಪ್ರವೇಶ ಮಾಡಿದೆನು.

ನಾನು—ನೀನು ಆರ ಜತೆಯಲ್ಲಿ ಹೋದೆಯೋ ಆತನ ಹೆಸರೇನು ಬಲ್ಲೆಯು?

ಮಾರ—ಬಲ್ಲೆ. ಆತನ ಹೆಸರು ಗೋಪಿಕಾನಾಥ.

ನಾನು—ಅವನಿರುವುದೆಲ್ಲಿ? ಮಾಡುವುದೇನು?

ಮಾರ—ಮಧುಸೂದನಶರ್ಮನ ಮನೆಯಲ್ಲಿ ಕೆಲಸಕ್ಕೆ ಇರುವನು.

ನಾನು—ಮಧುಸೂದನಶರ್ಮನಾರು?

ಮಾರ—ಇದೇ ಬೀದಿಯಲ್ಲಿ ಆತನು ಒಬ್ಬ ಕೊಬ್ಬಿದ ಹಣಗಾರನು. ಆತನು ದೊಡ್ಡ ಜಮೀಂದಾರನೂ ಆಹುದು.

ನಾನು—ಈತನು ಮಧುಸೂದನಶರ್ಮನ ಮನೆಯಲ್ಲಿ ಕೆಲಸಕ್ಕಿರುವನೆಂದು ನಿನಗೆ ಹೇಗೆ ಗೊತ್ತು?

ಮಾರ—ಆತನೇ ನನಗೊಂದು ದಿನ ಹೇಳಿದ್ದನು.

ನಾನು—ಹಾಗಾದರೆ ನಿನಗೂ ಗೋಪಿಕಾನಾಥನಿಗೂ ಮೊದಲಿನಿಂದಲೂ ಸ್ನೇಹವಿದ್ದಿತೋ?

ನಾನಾಡಿದ ಮಾತನ್ನು ಕೇಳಿ ಮಾರನು ಹೆದರಿದವನಾಗಿ, ತಾನಾಡಿದ ಮಾತನ್ನು ಉಳಿಸಿಕೊಳ್ಳುವುದಕ್ಕೋಸ್ಕರ ಏನೇನೋ ಮಾತನ್ನು ಪ್ರಾರಂಭಿಸಿದನು. ನಾನು ಆ ಮಾತುಗಳಿಗೆಲ್ಲ ಕಿವಿಗೊಡದೆ—ಗುಡಿಯೊಳಗೆ ಹೋಗಿ ನೀನೇನ ಮಾಡಿದೆ? ಎಂದು ಕೇಳಿದೆನು.

ಮಾರ—ಗೋಪಿಕಾನಾಥನು ನನ್ನನ್ನು ಗರ್ಭ ಗುಡಿಯ ಹತ್ತಿರಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಬೇರೆ ಬೇರೆಯಾಗಿ ಬಿದ್ದಿದ್ದ ರುಂಡವನ್ನೂ ಮುಂಡವನ್ನೂ ನನಗೆ ತೋರಿಸಿ, ಈತನೇ ನಮ್ಮ ಯಜಮಾನನು, ಎಂದನು.

ನಾನು—ಮುಂದೆ.

ಮಾರ—ನಾನು ಬಹಳ ಹೊತ್ತು ಅಲ್ಲಿ ನಿಂತಿರಲಾರದೆ ನಾನಿದ್ದ ಸ್ಥಳಕ್ಕೆ ಹಿಂದಿರುಗಿ ಬಂದು, ನಾನು ನೋಡಿದ ಅಂಶವನ್ನು ಹೊರಗೆ ಕಾದಿದ್ದ ಮತ್ತೊಬ್ಬ ಯಾಮಿಕನಿಗೆ ತಿಳಿಸಿದೆನು. ನಡೆದ ಸಂಗತಿಗಳನ್ನು ಸಂಸ್ಥಾನದ ದೊಡ್ಡ ಅಧಿಕಾರಿಗಳಿಗೆ ತಿಳಿಸೋಣವೆಂದು ಅಲ್ಲಿಂದ ನಾವಿಬ್ಬರೂ ಹೊರಟು ಹೋದೆವು.

---

## ಮೂರನೆಯ ಅಧ್ಯಾಯ

ಮಾರನು ನಡೆದ ಸಂಗತಿಯನ್ನು ಆವ ರಕ್ಷಾಧಿಕಾರಿಗೆ ತಿಳಿಸಲು ಹೊರಟು ಹೋದನೋ ಆ ಅಧಿಕಾರಿಯ ಬಳಿಗೆ ನಾನು ಹೋಗಿ ಎಷ್ಟು ಅಂಶಗಳನ್ನು ತಿಳಿಯಬೇಕೋ ಅಷ್ಟನ್ನು ತಿಳಿದುಕೊಂಡೆನು. ಮತ್ತೆ ಈ ವಿಷಯದಲ್ಲಿ ಮಾರನಿಂದ ನಾನು ತಿಳಿದುಕೊಳ್ಳಬೇಕಾದ ವಿಷಯವಾವುದೂ ಇರಲೇ ಇಲ್ಲ. ನಾನು ಕೃತ್ಯ ನಡೆದ ಸ್ಥಳಕ್ಕೆ ಹೋಗಿ, ನನಗೆ ಏನೇನು ವಿಷಯಗಳು ಬೇಕೋ ಅದೆಲ್ಲವನ್ನೂ ಆರನ್ನೂ ಕೇಳದೆ ತಿಳಿದುಕೊಂಡೆನು. ನಾನು ಅಲ್ಲಿ ನೋಡಬೇಕಾಗಿದ್ದುದೆಲ್ಲವನ್ನೂ ನನ್ನ ಕಣ್ಣಿನಿಂದಲೇ ನೋಡಿಕೊಂಡು, ಅಲ್ಲಿಂದ ನಾನು ಹೆಣವನ್ನು ಪರೀಕ್ಷಿಸುವ ಮನೆಗೆ ಹೋಗಿ ಅಲ್ಲಿದ್ದ ಎರಡು ಹೆಣಗಳನ್ನೂ ಚೆನ್ನಾಗಿ ನೋಡಿಕೊಂಡು ಮನೆಗೆ ಹಿಂದಿರುಗಿದೆನು.

ನಾನು ಬಂದುದನ್ನು ನೋಡಿ ನನ್ನ ಹೆಂಡತಿಯು ಪ್ರೀತಿಯಿಂದ—ಇಂದಿನ ವಿಷಯವೇನು ? ಎಂದು ಕೇಳಿದಳು.

ನಾನು ನಡೆದುದೆಲ್ಲವನ್ನೂ ಸಂಕ್ಷೇಪವಾಗಿ ಆಕೆಗೆ ತಿಳಿಸಿದೆನು. ಪಾಠಕ ಮಹಾಶಯ, ನಾನು ದಂಭಕ್ಕೆ ಹೇಳುವುದಿಲ್ಲ. ನನ್ನ ಹೆಂಡತಿಯು ಬಹಳ ಒಳ್ಳೆಯ ಹೆಂಗುಸು, ಆಕೆಯು ಅಷ್ಟು ಒಳ್ಳೆಯವಳಾಗಿಲ್ಲದಿದ್ದರೆ ನನ್ನ ಸಂಸಾರ ನಡೆಯುವುದು ಬಹಳ ಕಷ್ಟಕ್ಕೆ ಬರುತ್ತಿತ್ತು. ನಾನು ಕೆಲಸವನ್ನು ನಿಮಿತ್ತ ಮಾಡಿಕೊಂಡು ಹತ್ತಾರು ದಿವಸ ದೇಶಾಂತರ ಹೊರಟು ಹೋದರೂ, ಆಕೆಯು ಮನೆಯ ಕೆಲಸವನ್ನು ತೊಂದರೆ ಇಲ್ಲದೆ ನೆರವೇರಿಸಿಕೊಂಡು ಹೋಗುವಳು. ನಾನು ಬರಲಿಲ್ಲವೆಂಬುದಾಗಲಿ, ಹೆಂಗುಸಾದ ತಾನು ಒಬ್ಬಳೇ ಮನೆಯಲ್ಲಿ ಹೇಗಿರುವುದೆಂಬುದಾಗಲಿ, ಗೃಹಕೃತ್ಯವು ನಡೆಯುವ ಬಗೆ ಹೇಗೆಂಬುದಾಗಲಿ, ಆಕೆಯು ಎಂದಿಗೂ ಆಲೋಚಿಸತಕ್ಕವಳೇ ಅಲ್ಲ. ಆಕೆಯಲ್ಲಿ ಒಂದು ದೋಷ ಮಾತ್ರ ವಿದ್ದಿತು; ನಾನು ಪರಸ್ಥಳಗಳಿಗೆ ಹೋದಾಗ ಪತ್ರವನ್ನು ಬರೆಯದೇ ಇದ್ದಲ್ಲಿ

ಆಕೆಯು ಹೊತ್ತಿಗೆ ಹೊತ್ತಿಗೆ ಊಟ ಮಾಡುವುದಿಲ್ಲ, ರಾತ್ರಿಯಲ್ಲಿ ಕಣ್ಣುತುಂಬ ನಿದ್ರೆ ಮಾಡುವುದಿಲ್ಲ. ಆವಾಗಲೂ ಏನಾದರೊಂದು ಪುಸ್ತಕವನ್ನು ಇಟ್ಟು ಕೊಂಡು ಓದುತ್ತಲೇ ಇರುವಳು. ಅದೇನು ಓದುವಳೋ ಅದು ಮಾತ್ರ ಅವಳಿಗೇ ಗೊತ್ತು. ನನ್ನಿಂದ ಪತ್ರವೇನಾದರೂ ಬಂದಲ್ಲಿ ಪುಸ್ತಕ ಗಿಸ್ತಕ ದೂರ ಬಿಸುಟು, ಮನೆಯ ಕೆಲಸದಲ್ಲಿ ಆವಾಗಲೂ ನಿರತಳಾಗಿರುವಳು. ನಾನು ಸೂಕ್ಷ್ಮಬುದ್ಧಿ ಯನ್ನು ಉಪಯೋಗಿಸಿ ಏನಾದರೂ ಕೆಲಸ ಮಾಡಿದ್ದರೆ ಅದನ್ನು ಕೇಳುವುದಕ್ಕೆ ಆಕೆಗೆ ತುಂಬ ಇಷ್ಟ. ನನ್ನ ಹೆಂಡಿತಿಗೆ ದೇವ ದ್ವಿಜರಲ್ಲಿ ಭಕ್ತಿಯೂ, ನನ್ನಲ್ಲಿ ವಿಶ್ವಾಸವೂ ಎಲ್ಲಿಯ ವರೆಗೆ ದೃಢವಾಗಿರುವುದೋ, ಅಲ್ಲಿಯ ವರೆಗೂ ನನ್ನ ಕೆಲ ಸದಲ್ಲಿ ಆವ ವಿಧವಾದ ತೊಂದರೆಯೂ ಸಂಭವಿಸುವಂತಿರಲಿಲ್ಲ.

ಏನಾದರೂ ಆಗಲಿ; ನಾನು ಹೆಂಡಿತಿಯ ಗುಣವನ್ನು ವರ್ಣನೆ ಮಾಡುವು ದರಲ್ಲಿ ಬಹಳ ಕಾಲವನ್ನು ತೆಗೆದುಕೊಂಡೆನು. ಆದರೆ ನಾನು ನನ್ನ ಹೆಂಡಿತಿಯ ರೂಪವನ್ನು ವರ್ಣನೆ ಮಾಡಲಿಲ್ಲವಾಗಿ ವಾಚಕರ ಆಗ್ರಹಕ್ಕೆ ಪಾತ್ರವಾಗುವಂತಿಲ್ಲ. ನನಗೆ ಹೆಂಡಿತಿಯಲ್ಲಿ ಗುಣಬೇಕೇ ಹೊರತು ರೂಪವಲ್ಲ. ಆದುದರಿಂದ ನನ್ನ ಹೆಂಡಿತಿಯು ಗುಣವಂತಳಾಗಿದ್ದಳೇ ಹೊರತು ರೂಪವಂತಳಾಗಿರಲಿಲ್ಲ. ಆಕೆಗೆ ರೂಪವಿದ್ದಿದ್ದರೆ ಪತ್ತೇದಾರನಾದ ನನಗೆ ಸಂಸಾರದಲ್ಲಿ ಎಷ್ಟೋ ತೊಂದರೆಗಳು ಇರುತ್ತಿದ್ದುವು. ನನ್ನ ಹೆಂಡಿತಿಯು ಗುಣವಂತೆಯಾದುದರಿಂದ ನನ್ನ ಕಾರ್ಯದಲ್ಲಿ ನನಗೆ ಆಕೆಯಿಂದ ಎಷ್ಟೋ ಸಾಹಾಯ್ಯವಾಗುತ್ತಿತ್ತು.

ನನ್ನ ಹೆಂಡಿತಿಯು ಕಷ್ಟಕಾಲದಲ್ಲಿ ನನಗೆ ಅಮೂಲ್ಯವಾದ ಪರಾಮರ್ಶ ವನ್ನು ಕೊಡತಕ್ಕವಳಾಗಿದ್ದಳು. ಆಕೆಯ ಗೆಳತಿಯರಾರಾದರೂ ಕೇಳಿದರೆ, "ಬುದ್ಧಿಮಂತನಾದ ಗಂಡನಿಗೆ ಹೆಂಡಿತಿಯಾಗಿ ದಡ್ಡಳಂತೆ ಸಂಸಾರ ಮಾಡಿ ಕೊಂಡಿರುವುದೇ? ಇದು ಎಂತಹ ನಾಚುಗೆಗೇಡು? ಪ್ರಿಯನಿಗೆ ಎಲ್ಲಾ ಕೆಲಸ ದಲ್ಲಿಯೂ ಅನುಕೂಲೆಯಾಗಿದ್ದುಕೊಂಡು, ಆತನ ವಿಶ್ವಾಸಕ್ಕೆ ಪಾತ್ರವಾಗಬೇಕೆಂ ಬುದೇ ನನಗೆ ಮುಖ್ಯವಾದ ಉದ್ದೇಶ. ಹೇಗಿದ್ದರೂ ಇತರರು ಆಡಿಕೊಳ್ಳುವುದು ಬೇರೆ ತಪ್ಪುವುದಿಲ್ಲ. ನನಗೆ ಇತರರಿಂದ ಆಗುವುದೇನು? ನನಗೆ ಬೇಕಾದುದು ನನ್ನ ಸರ್ವಸ್ವ ಸ್ವರೂಪನಾದ ಗಂಡನೇ ಹೊರತು ಮತ್ತೆ ಬೇರೆಯಲ್ಲ," ಎಂದು ಹೇಳಿ ಎಲ್ಲರ ಬಾಯನ್ನೂ ಮುಚ್ಚಿಸುತ್ತಿದ್ದಳು. ಇದನ್ನು ಕೇಳಿ ಎಲ್ಲರೂ ನನ್ನನ್ನು ಧನ್ಯನೆಂದು ಹೊಗಳುತ್ತಿದ್ದರು. ನಾನು ಇದನ್ನು ಕೇಳಿ ನನ್ನ ಹೆಂಡಿತಿಯನ್ನು ಮತ್ತಷ್ಟು ಹೆಚ್ಚಾಗಿ ಪ್ರೀತಿಸುತ್ತಿದ್ದೆನು. ನಾನು ಪ್ರೀತಿಸಿದ ಹಾಗೆಲ್ಲ ಆಕೆಯು ನನಗೆ ಸಕಾಲದಲ್ಲಿ ಯುಕ್ತವಾದ ಸಲಹೆಗಳನ್ನು ಕೊಡುತ್ತಿದ್ದಳು. ಈಸಲವೂ ನನ್ನ ಹೆಂಡಿತಿಯು ನನ್ನ ಬಾಯಿಂದ ನರಬಲಿಯ ಸುದ್ದಿಯನ್ನು ಕೇಳಿ, ಶ್ಲಾಘ್ಯ

ವಾದೊಂದು ಯುಕ್ತಿಯನ್ನು ಹೇಳಿಕೊಟ್ಟಳು. ನಾನು ಅದರಂತೆಯೇ ನಡೆಯಲು, ಕೈಕೊಂಡ ಕಾರ್ಯವು ಸಫಲವಾಯಿತು. ಅದರಿಂದ ನನಗೆ ಸರ್ಕಾರದಲ್ಲಿ ಗಣ್ಯವಾದ ಪದವಿಯ ಲಾಭವುಂಟಾಯಿತು. ಇದಕ್ಕಾಗಿ ನಾನು ಹೆಂಡಿತಿಯನ್ನು ಹೊಗಳುವೆನು. ಇದು ಮಹಾದೋಷವೆಂದು ಜನಗಳು ತಿಳಿಯುವುದಾದರೆ, ನಾನು ಅವರ ಕ್ಷಮೆಯನ್ನು ಬೇಡಿ ಪ್ರಕೃತ ವಿಷಯವನ್ನು ಕುರಿತು ತೆರಳುವೆನು.

ಮರು ದಿನ ಬೆಳಗಿನ ಜಾವ ಸುಮಾರು ೪ ಗಂಟೆಯ ಸಮಯದಲ್ಲಿ ನಾನು ಹಾಸುಗೆಯಿಂದೆದ್ದು ಭುವನೇಶ್ವರೀ ಮಾರ್ಗಕ್ಕೆ ಹೊರಟೆನು. ಆಗ ಅನೇಕ ಜನ ಹೆಂಗುಸರು ಬಟ್ಟೆಯ ಗಂಟುಗಳನ್ನು ಹೊತ್ತುಕೊಂಡು ನದಿಯ ಸ್ನಾನಕ್ಕೆ ಹೊರಡುತ್ತಿದ್ದರು. ಕೊಲೆ ವಿಷಯದಲ್ಲಿ ಅವರ ಬಾಯಿಂದ ಏನು ಮಾತುಗಳು ಹೊರಡುತ್ತವೆ ಯೆಂಬುದನ್ನು ತಿಳಿಯುವುದೇ ನನಗೆ ಮುಖ್ಯೋದ್ದೇಶವಾಗಿದ್ದುದರಿಂದ, ನಾನು ಅಷ್ಟು ಹೊತ್ತಿಗೇನೇ ಕೃತ್ಯ ನಡೆದ ಸ್ಥಳಕ್ಕೆ ಹೋದುದು. ಆ ಹೆಂಗುಸರ ಮಧ್ಯದಲ್ಲಿ ಇಬ್ಬರು ಪೌಢ್ರೆಯರು ಅವುದೋ ಒಂದು ವಿಷಯವನ್ನು ಕುರಿತು ದಾರಿಯುದ್ದಕ್ಕೂ ಮಾತನಾಡುತ್ತಲೂ, ಕೈ ಅಲ್ಲಾಡಿಸುತ್ತಲೂ, ಮುಖವನ್ನು ಅಲುಗಾಡಿಸುತ್ತಲೂ ನದಿಯ ಕಡೆಗೆ ಹೋಗುತ್ತಿದ್ದರು. ಅವರ ಮಾತನ್ನು ಕೇಳಲು ನನಗೆ ಇಷ್ಟವುಂಟಾಗಲು, ನಾನು ಅವರ ಹಿಂದೆ ಹಿಂದೆಯೇ ನದಿಯ ಕಡೆಗೆ ತೆರಳಿದೆನು.

ಒಬ್ಬ ಹೆಂಗುಸು ಕೇಳಿದಳು—ವಿಶ್ವನಾಥನಿಗೆ ಎಷ್ಟು ಆಸ್ತಿಯಿದ್ದಿತು?

ಮತ್ತೊಬ್ಬಳು ಹೇಳಿದಳು—ನಾನು ಹೇಗೆ ಹೇಳಲಿ? ಅವನು ಬಹಳ ಕೃಪಣನಾಗಿದ್ದುದರಿಂದ ಅವನ ಆಸ್ತಿ ಇಷ್ಟೆಂದು ಆರಿಗೂ ಗೊತ್ತಿಲ್ಲ. ನಮ್ಮ ಯಜಮಾನರು ಆತನ ಬಳಿಯಲ್ಲಿ ಒಂದುಕೋಟಿ ರೂಪಾಯಿಗೇನೂ ಕಡಮೆಯಿರಲಿಲ್ಲವೆಂದು ಹೇಳಿದುದನ್ನು ಕೇಳಿರುವೆನು. ಹಾಗಿಲ್ಲದಿದ್ದರೆ ಆತನ ಮನೆಯ ಬಾಗಿಲಿನಲ್ಲಿ ಹಗಲಿರುಳೂ ಇಷ್ಟೊಂದು ಜನ ಕಾದುಬಿದ್ದಿರುತ್ತಿದ್ದರೇ? ಅವನಲ್ಲಿ ನಗದೇ ಅಷ್ಟಿರ ಬಹುದು. ಒಡವೇ ವಸ್ತುಗಳು ಇನ್ನೆಷ್ಟಿರಬಹುದೋ ದೇವರೇ ಬಲ್ಲನು.

ಮೊದಲನೆಯವಳು—ಒಳ್ಳೆಯದು, ವಿಶ್ವನಾಥನು ಈ ಮುದಿವಯಸ್ಸಿನಲ್ಲಿ ಮತ್ತೆ ಮದುವೆಯಾದುದೇತಕೆ? ಹುಡುಗಿಯ ತಲೆಯ ಮೇಲೆ ಕಲ್ಲ ಹಾಕಿ ಸತ್ತೇ ಹೋದನಲ್ಲ! ಈಗ ಆಕೆ ಎಲ್ಲಿರುವಳು?

ಎರಡನೆಯವಳು—ತಂದೆಯ ಮನೆಯಲ್ಲಿರುವಳೆಂದು ಕೇಳಿರುವೆನು.

ಮೊದಲನೆಯವಳು—ತಂದೆಯ ಮನೆಯೆಲ್ಲಿ?

ಎರಡನೆಯವಳು—ಅನಂತಪುರದಲ್ಲಿ.

ಮೊದಲನೆಯವಳು—ಆಕೆಯ ತಂದೆಯ ಹೆಸರೇನು?

ಎರಡನೆಯವಳು—ಶಿವಶಂಕರಶಾಸ್ತ್ರಿ.

ಮೊದಲನೆಯವಳು—ಆತನು ಬದುಕಿರುವನೇ?

ಎರಡನೆಯವಳು—ಇಲ್ಲ.

ಮೊದಲನೆಯವಳು—ಹಾಗಾದರೆ ಅಲ್ಲಾರಿರುವರು?

ಎರಡನೆಯವಳು—ಆತನ ಸ್ಥಿತಿಗತಿಗಳನ್ನು ಕುರಿತು ನಾನು ಏನೆಂದು ಹೇಳಲಿ? ಶಿವಶಂಕರಶಾಸ್ತ್ರಿ ನಿತ್ಯದರಿದ್ರನು. ಆತನು ಊರೆಲ್ಲಾ ಅಲೆದು ಒಂದೆರಡು ಕಾಸುಗಳು ತಂದರೆ, ಅಂದಿನ ಮನೆಯ ಸಂಸಾರ ತೂಗುವುದು. ಹೀಗಿದ್ದುದರಿಂದಲೇ ಆತನು ತನ್ನ ಮಗಳನ್ನು ಮುದುಕನಾದರೂ ಚಿಂತೆಯಿಲ್ಲವೆಂದು ವಿಶ್ವನಾಥನಿಗೆ ಕೊಟ್ಟು ವಿವಾಹ ಮಾಡಿದನು. ಹುಡುಗಿಯು ಗಂಡನ ಮನೆಯಲ್ಲಿದ್ದುಕೊಂಡು ತನ್ನ ತಂದೆಯ ಸಂಸಾರಕ್ಕಾಗಿ ತಿಂಗಳಿಗೆ ಹತ್ತು ರೂಪಾಯಿಗಳನ್ನು ಆರಿಗೂ ಕಾಣದಂತೆ ಕಳುಹಿಸಿಕೊಡುತ್ತಿದ್ದಳು. ಗಂಡನು ಬದುಕಿರುವ ವರೆಗೂ ತಂದೆಗೆ ಸಾಹಾಯ್ಯ ಮಾಡುತಿದ್ದು, ಗಂಡನು ಪರಲೋಕವನ್ನೈದಿದ ಮೇಲೆ ಹುಡುಗಿಯು ತಂದೆಯ ಮನೆಗೆ ಬಂದುಬಿಟ್ಟಳು. ತಿಂಗಳಿಗೆ ಬರುತ್ತಿದ್ದ ಹತ್ತು ರೂಪಾಯಿಯ ಸಾಹಾಯ್ಯವೂ ನಿಂತುಹೋಯಿತು. ಶಿವಶಂಕರಶಾಸ್ತ್ರಿಯು ಎಂದಿನಂತೆ ಅತಿ ಪ್ರಯಾಸದಿಂದ ಎರಡು ವರ್ಷಗಳ ಕಾಲ ಸಂಸಾರಮಾಡಿಕೊಂಡಿದ್ದು ಕೊನೆಗೆ ಮರಣವನ್ನೈದಿದನು.

ಮೊದಲನೆಯವಳು—ಆ ಹುಡುಗಿಯು ಈಗಲೂ ತಂದೆಯ ಮನೆಯಲ್ಲಿಯೇ ಇರುವಳೇ?

ಎರಡನೆಯವಳು—ಈಗ ಅವಳೆಲ್ಲಿದಾಳೆಯೋ ನನಗೆ ಗೊತ್ತಿಲ್ಲಮ್ಮ. ನಾನೆಂದಾದರೂ ಸುಂಕನಹಳ್ಳಿಗೆ ಹೋದರೆ ಅವಳ ವಿದ್ಯಮಾನವನ್ನು ತಿಳಿದುಕೊಂಡು ಬರುವೆನು.

ಆ ಇಬ್ಬರು ಹೆಂಗುಸರು ಈ ರೀತಿಯಲ್ಲಿ ಮಾತನಾಡಿಕೊಂಡು ನೀರಿನ ತಡಿಗೆ ಹೋದರು. ಅವರ ಮಾತಿನಿಂದ ವಿಶೇಷ ಸಂಗತಿಯೇನೂ ಕಂಡುಬರಲಿಲ್ಲವಾಗಿ ನಾನು ನಿರಾಶನಾಗಿ ಹಿಂದಿರುಗಿ ಮನೆಗೆ ಬಂದು ಸೇರಿದೆನು.

ನಾನು ಮನೆಗೆ ಬಂದ ಕೂಡಲೆ ಹೆಂಡಿತಿಯನ್ನು ಕರೆದು—ನಾವು ಆಲೋಚನೆ ಮಾಡಿದಂತೆ ಆವ ಕೆಲಸವೂ ನಡೆಯಲಿಲ್ಲ, ಎಂದು ಹೇಳಿದೆನು.

ಅದಕ್ಕೆ ಹೆಂಡಿತಿ ಕೇಳಿದಳು—ಹಾಗಾದರೆ ಅಲ್ಲಿ ನಡೆದುದೇನು?

ನಾನು ನಡೆದುದೆಲ್ಲವನ್ನೂ ಆಕೆಗೆ ತಿಳಿಸಿದೆನು. ನನ್ನ ಮಾತು ಮುಗಿಯುವುದರೊಳಗಾಗಿಯೇ ಮತ್ತೊಂದು ವಿಷಯವು ಮನಸ್ಸಿಗೆ ಹೊಳೆಯಿತು. ಅದನ್ನು ನಾನು ನನ್ನ ಹೆಂಡಿತಿಗೆ ತಿಳಿಸದೆ—ಪ್ರಿಯೆ, ನೀನು ಈ ದಿನ ಸುಂಕನಹಳ್ಳಿಗೆ ಹೋಗಿಬರುವೆಯ? ಎಂದು ಕೇಳಿದೆನು.

ಹೆಂಡಿತಿ—ಏನಾದರೂ ಪತ್ತೆಗಾಗಿಯೋ?

ನಾನು—ಅದಕ್ಕಾಗಿಯೆ.

ಹೆಂಡಿತಿ—ಸುಂಕನಹಳ್ಳಿಯಲ್ಲಿ ನನಗೇನು ಕೆಲಸವಿರುವುದು? ಹೆಣ್ಣುಹೆಂಗುಸಿಗೆ ಗಂಡಸರು ಮಾಡಬೇಕಾದ ಕೆಲಸವೇನು ಗೊತ್ತಾಗುವುದು?

ನಾನು—ನಿನಗೇಕೇ ಅದರ ಆಲೋಚನೆ! ನಾನು ಹೇಳಿದಷ್ಟು ಕೆಲಸ ಮಾಡು. ನೀನು ಸುಂಕನಹಳ್ಳಿಗೆ ಹೋಗುವುದರೊಳಗಾಗಿಯೇ ಕೆಲವು ಸಂಗತಿಗಳು ತಿಳಿಯಬಹುದು. ನೀನು ಹೋಗದೇ ಹೋದರೆ ನನ್ನ ಕೆಲಸವು ಕೈಗೂಡುವಹಾಗಿಲ್ಲ. ಪ್ರಕೃತ ಸಂದರ್ಭದಲ್ಲಿ ನಿನ್ನಿಂದಲೂ ಬಹಳ ಕೆಲಸಗಳು ಆಗಬೇಕಾಗಿವೆ.

ಹೆಂಡಿತಿ—ನನ್ನಿಂದಲೂ ಕೆಲಸವೇ! ನೋಡಿದರೆ ತಾವು ನನ್ನನ್ನು ಹೀಯಾಳಿಸುವಂತಿದೆ.

ನಾನು—ತಲೆ ಹೋಗುವ ಕಾಲದಲ್ಲಿ ಹಾಸ್ಯವೆಂದರೇನು? ಬೇಗಬೇಗನೆ ಊಟವನ್ನು ತೀರಿಸಿಕೊಂಡು ಗಾಡಿ ಹತ್ತಿ ಸುಂಕನಹಳ್ಳಿಯ ಕಡೆಗೆ ಹೊರಡು. ಆಗ ನೀನು ಮಾಡಬೇಕಾದ ಕೆಲಸವೇನೆಂಬುದನ್ನು ಹೇಳುವೆನು.

ನನ್ನ ಹೆಂಡಿತಿಯು ನಾನು ಹೇಳಿದ ಮಾತನ್ನು ಕೇಳಿ ಮನೆಯೊಳಗೆ ಹೊರಟು ಹೋದಳು. ನಾನೊಬ್ಬನೇ ಕುಳಿತುಕೊಂಡು ಮುಂದೇನ ಮಾಡಬೇಕೆಂಬುದನ್ನು ಸ್ಥಿರಮಾಡಿಕೊಳ್ಳಲಾರಂಭಿಸಿದೆನು.

---

## ನಾಲ್ಕನೆಯ ಅಧ್ಯಾಯ

ಹೆಂಗುಸನ್ನು ಕೊಂದವರಾರು? ಆಕೆಯ ವಾಸಸ್ಥಾನವೆಲ್ಲಿರುವುದು? ಇವಾದಿಯಾಗಿ ನಾನು ಮೊದಲು ಚಿಂತೆಮಾಡಿದೆನು. ರಾಮರಾಜ ಮೊಹಲ್ಲಾದಲ್ಲಿ ಎಲ್ಲಾ ಕಡೆಯಲ್ಲಿಯೂ ಹುಡುಕಿಸಿದುದಾಯಿತು. ಆರ ಮನೆಯ ಹೆಂಗುಸನ್ನೂ ಆರೂ ಕೊಲೆ ಮಾಡಲಿಲ್ಲ. ಹಾಗಾದರೆ ಸತ್ತುಹೋದ ಹೆಂಗುಸು ಆರಿರಬಹುದು? ದೊಡ್ಡವರ ಮನೆಯ ಹೆಂಗುಸಾಗಿದ್ದರೆ ಕ್ಷಣಮಾತ್ರದಲ್ಲಿಯೇ ಊರಲ್ಲೆಲ್ಲಾ ಗಲಭೆಯಾಗಿ ಬಿಡುತ್ತಿದ್ದಿತು. ಆವ ಗಲಭೆಯೂ ಇಲ್ಲದಿರುವುದು ನೋಡಿದರೆ, ಕೊಲೆಯಾದ ಹೆಂಗುಸು ಆರೋ ದಿಕ್ಕಿಲ್ಲದವರಾಗಿರಬೇಕು. ಮತ್ತೂ ಮೃತದೇಹವನ್ನು ಪರೀಕ್ಷಿಸಿದುದರಲ್ಲಿ ಆಕೆಯ ಮೈಮೇಲೆ ಒಂದಾಭರಣವೂ ಕಂಡುಬಾರದುದರಿಂದ, ಆಕೆಯು ಆರೋ ಹಳ್ಳಿಯ ಹೆಂಗುಸಾಗಿರಬೇಕು.

ಈ ರೀತಿಯಲ್ಲಿ ನಾನು ಆಲೋಚನೆ ಮಾಡುತೆ ಮಾಡುತೆ, ನನಗೆ ನಾನೇ ಪ್ರಶ್ನೆ ಹಾಕಿಕೊಳ್ಳುವುದೂ, ನನಗೆ ನಾನೇ ಉತ್ತರ ಹೇಳುವುದೂ ಹೀಗೆ ಮಾಡಲಾರಂಭಿಸಿದೆನು.

ಅದು ಈಪರಿಯಿದ್ದಿತು :—

ಪ್ರಶ್ನೆ—ಆ ಹೆಂಗುಸಾರು?

ಉತ್ತರ—ಹೆಂಗುಸಾರೆಂಬುದು ಗೊತ್ತಾದರೆ ಇಷ್ಟು ತೊಂದರೆ ಏತಕೆ? ಅವಳನ್ನು ತಿಳಿಯುವುದಕ್ಕಾಗಿಯೇ ಪ್ರಯತ್ನ ಮಾಡಬೇಕು.

ಪ್ರಶ್ನೆ—ಆ ಹೆಂಗುಸು ಎಲ್ಲಿಂದ ಬಂದವಳು?

ಉತ್ತರ—ಮಾರನು ಕೊಟ್ಟಿರುವ ವರದಿಯಲ್ಲಿ ಹೆಂಗುಸಿನ ದೇಹವು ಪೂರ್ವಪಶ್ಚಿಮವಾಗಿ ಬಿದ್ದಿರುವುದು. ತಲೆ ಪೂರ್ವದ ಕಡೆ; ಕಾಲು ಪಶ್ಚಿಮದ ಕಡೆ, ಎಂದಿರುವುದರಿಂದ ಹೆಂಗುಸು ಪೂರ್ವದಿಕ್ಕಿನಿಂದ ಪಶ್ಚಿಮದ ಕಡೆಗೆ ಬರುತ್ತಿದ್ದಂತೆ ತೋರುವುದು. ಹತ್ಯಾಕಾರಿಯು ಪಶ್ಚಿಮದಿಂದ ಬಂದು ಆಕೆಯ ಮುಖ, ಎದೆ, ಹೊಟ್ಟೆ ಇವುಗಳ ಮೇಲೆ ಚೂರಿಯಿಂದ ತಿವಿದಿರುವನು. ಆಕೆಯು ಮುಖ ಮೇಲಾಗಿ ಪೂರ್ವದ ಕಡೆ ತಲೆ, ಪಶ್ಚಿಮದ ಕಡೆ ಕಾಲು ಮಾಡಿಕೊಂಡು ಬಿದ್ದಿರುವಳು.

ಪ್ರಶ್ನೆ—ಈರೀತಿಯಾಗಿ ಆಲೋಚಿಸಿದುದರಿಂದ ಪ್ರಯೋಜನವೇನು?

ಉತ್ತರ—ಪ್ರಯೋಜನವಿಲ್ಲವೆಂದು ಹೇಳುವುದಕ್ಕಾಗುವುದಿಲ್ಲ. ದಿಕ್ಕುಗಳು ಗೊತ್ತಾಗುವುದರಿಂದ ಆಕೆಯು ಆರ ಮನೆಯಿಂದ ಬಂದಿರಬಹುದೆಂದು ಕೊಂಚ ಮಟ್ಟಿಗೆ ಊಹಿಸುವುದಕ್ಕೆ ಅನುಕೂಲವಾಗುವುದು.

ಪ್ರಶ್ನೆ—ಅದು ಹಾಗಿರಲಿ. ಒಂದೇ ಕಾಲದಲ್ಲಿ ಒಂದೇ ಸ್ಥಳದಲ್ಲಿ ಒಂದೇ ರೀತಿಯಲ್ಲಿ ಎರಡು ಕೊಲೆಗಳಾಗಿವೆಯಲ್ಲ? ಇದನ್ನು ನೋಡಿ ಜನಗಳಿಗೆ ಎಂತಹ ಸಂಶಯವುಂಟಾಗುವುದು?

ಉತ್ತರ—ಒಬ್ಬ ಹತ್ಯಾಕಾರಿಯೇ ಈ ಎರಡು ಕೆಲಸಗಳನ್ನೂ ಮಾಡಿರುವನೆಂದು ತೋರುವುದು.

ಪ್ರಶ್ನೆ—ಹಾಗಾದರೆ ಹೆಂಗುಸಿನ ಕೊಲೆಗೂ, ಮಧುಸೂದನನ ಕೊಲೆಗೂ ಸಂಬಂಧವೇನಾದರೂ ಇದೆಯೋ ಇಲ್ಲವೇ?

ಉತ್ತರ—ಒಬ್ಬ ಮನುಷ್ಯನೇ ಈ ಎರಡು ಕೊಲೆಯನ್ನು ಮಾಡಿದ್ದರೂ ಮಾಡಿರಬಹುದು. ಇಲ್ಲವೇ, ಹೆಂಗುಸನ್ನು ಕೊಂದವನೇ ಒಬ್ಬನು; ಗಂಡಸನ್ನು ಕೊಂದವನೇ ಒಬ್ಬನು ಆಗಿರಬಹುದು.

ಪ್ರಶ್ನೆ—ಗಂಡಸನ್ನು ಕೊಂದವರಾರು?

ಉತ್ತರ—ಆವನೋ ಒಬ್ಬನು ಸ್ವಾರ್ಥಲೋಭದಿಂದ ಈ ಕೆಲಸ ಮಾಡಿರಬೇಕು.

ಪ್ರಶ್ನೆ—ಮತ್ತಾವ ಕಾರಣದಿಂದಲಾದರೂ ಕೊಂದಿರಕೂಡದೋ?

ಉತ್ತರ—ಹಾಗೆ ಆಲೋಚಿಸುತ್ತ ಹೋದರೆ ತುದಿಮೊದಲಿರುವುದಿಲ್ಲ. ಹಾಳಾದ ಹೆಂಗುಸಿನ ಸ್ವಭಾವವು ಕಳಂಕಿತವಾಗಿರಬಹುದು; ಮಧುಸೂದನನು ಆಕೆಯನ್ನು ಗೂಢವಾಗಿ ಪ್ರೀತಿಸುತ್ತಿದ್ದಿರಬಹುದು; ಆಕೆಯ ಗಂಡನು ಇದನ್ನು ನೋಡಿ, ತನಗುಂಟಾದ ಸಂಕಟವನ್ನು ತಡೆಯಲಾರದೆ ಇಬ್ಬರನ್ನೂ ಏಕಕಾಲದಲ್ಲಿಯೇ ಕೊಂದಿರಬಹುದು.

ಪ್ರಶ್ನೆ—ಪ್ರತ್ಯಕ್ಷವಾದರೂ ಪರೀಕ್ಷಿಸಿ ನೋಡಬೇಕೆಂದಿರುವುದು. ಆವುದನ್ನೂ ಸ್ಪಷ್ಟವಾಗಿ ತಿಳಿಯದೇ ಕೆಲಸ ಮಾಡಲಾಗದು.

ಉತ್ತರ—ಸತ್ತುಹೋದ ಹೆಂಗುಸಿಗೂ, ಸತ್ತುಹೋದ ಗಂಡಸಿಗೂ ಬಹಳ ದಿನದಿಂದಲೂ ಒಂದು ವಿಧದಲ್ಲಿ ಸಂಬಂಧವಿದ್ದಿತು. ಆಕೆಯ ಗಂಡನು

ಈ ಸಂಗತಿಯನ್ನು ಹೇಗೋ ತಿಳಿದುಕೊಂಡು ಸಮಯವನ್ನು ನಿರೀಕ್ಷಿಸಿಕೊಂಡಿರುತ್ತಿದ್ದನು. ಕಾಲ ವೊದಗಿತು. ಹೆಂಡತಿಯು ಮನೆಬಿಟ್ಟು ಹೊರಟ ಕೂಡಲೆ ಗಂಡನೂ ಹಿಂದೆ ಹಿಂದೆಯೇ ಹೊರಟನು. ಅವನು ಹೊರಡುವಾಗ ಒಂದು ಹರಿತವಾದ ಮಚ್ಚನ್ನು ಕೈಯಲ್ಲಿ ತೆಗೆದುಕೊಂಡು ಹೋಗಿದ್ದನು. ಹೆಂಡತಿಯು ಮಧುಸೂದನನು ವೊದಲು ಹೇಳಿದ್ದ ಸಂಕೇತ ಸ್ಥಳವನ್ನು ಪ್ರವೇಶಮಾಡಿದ ಕೂಡಲೆ, ಗಂಡನೂ ಪ್ರವೇಶ ಮಾಡಿದನು. ಅಲ್ಲಿ ಮಧುಸೂದನನು ಇದ್ದುದನ್ನು ಕಂಡು ವೊದಲು ಆತನನ್ನು ದೇವಿಗೆ ಬಲಿಕೊಟ್ಟನು. ಇದನ್ನು ನೋಡಿ ಆತನ ಹೆಂಡತಿಯು ಓಡಲಾರಂಭಿಸಿದಳು. ಗಂಡನಾದವನು ಹಿಂದಟ್ಟಿಕೊಂಡು ಹೋಗಿ ನಡು ಬೀದಿಯಲ್ಲಿ ಸಿಕ್ಕಿದ ಹೆಂಡತಿಯನ್ನು ತಿವಿದು ಕೊಂದುಬಿಟ್ಟು, ಭಯದಿಂದ ಎಲ್ಲಿಯೋ ಪಲಾಯನವಾಗಿರಬಹುದು.

ಪ್ರಶ್ನೆ—ಅಸಂಭವವೇನೂ ಅಲ್ಲ ; ಆದರೆ ರಾಮರಾಜವೊಹಲ್ಲಿಯಲ್ಲಿ ಎಲ್ಲಾ ಕಡೆಯಲ್ಲಿಯೂ ಹುಡುಕಿದ್ದಾಯಿತು. ಆವ ಗಂಡನೂ ಹೆಂಡತಿಯನ್ನು ಕೊಂದ ವಿಷಯವೇ ಹೊರಪಡುವಹಾಗಿಲ್ಲವಲ್ಲ ?

ಉತ್ತರ—ಜನಗಳು ಅಪವಾದಕ್ಕೆ ಹೆದರುವರು. ಹೆಂಗುಸು ದುಷ್ಟ ಚರಿತ್ರಳೆಂದು ಆರು ತಾನೇ ಪ್ರಮಾಣವಾಗಿ ಹೇಳಲು ಸಿದ್ಧರಾಗುವರು. ಯಾಮಿಕರು ತಮ್ಮ ಶಕ್ತಿಯನ್ನೆಲ್ಲಾ ಉಪಯೋಗಿಸಿ ಹುಡುಕಿದರು. ಆರೆಂಬುದೇ ಗೊತ್ತಾಗಲಿಲ್ಲ. ಸತ್ತುಹೋದವಳು ಹೋಗಿಯೇ ಹೋದಳು. ಅವಳು ಇನ್ನೇನೂ ಹಿಂದಿರುಗಿ ಬರುವ ಹಾಗಿಲ್ಲ. ನನಗೆ ಈ ಸಂದರ್ಭದಲ್ಲಿ ಎರಡು ಸಂದೇಹಕ್ಕೆ ಆಸ್ಪದವಾಗಿರುವುದು. ವೊದಲನೆಯದು-ಹತಳಾದ ಹೆಂಗುಸು ಸಧವೆಯಲ್ಲ ; ಅವಳು ವಿಧವೆ. ಕಾರಣವೇನೆಂದರೆ-ಆಕೆಯ ಹಣೆಯಲ್ಲಿ ಕುಂಕುಮವಿರಲಿಲ್ಲ. ಆಕೆಯು ಉಟ್ಟಿದ್ದ ಸೀರೆ ಅಂಚಿಲ್ಲದ ಸಾಮಾನ್ಯವಾದ ಬಿಳಿಯ ಬಟ್ಟೆಯಾಗಿದ್ದಿತು. ಇದು ನಿಜವಾಗುವುದಾದರೆ, ಈಕೆಯು ತನ್ನ ದುಷ್ಟ ಚರಿತ್ರೆಯಿಂದ ಆರ ಕೋಪಕ್ಕೋ ಪಾತ್ರವಾಗಿ ಪ್ರಾಣವನ್ನು ಕಳೆಯಿಸಿಕೊಂಡಿರುವಳು. ಇದು ಇದ್ದರೂ ಇರಬಹುದು. ಎರಡನೆಯದು-ಈಕೆಯು ಈ ಸ್ಥಳಕ್ಕೆ ಸೇರಿದವಳಲ್ಲ. ಹಾಗೆ ಸೇರಿದ್ದರೆ ಈಕೆ ಆರೆಂಬುದು ಗೊತ್ತಾಗುತ್ತಲೇ ಇದ್ದಿತು.

ಪ್ರಶ್ನೆ—ಯಾಮಿಕರು ಕಾಟಾಚಾರಕ್ಕೆ ಅಲ್ಲದೆ ನಿಜವಾಗಿಯೂ ಎಲ್ಲವನ್ನೂ ಹುಡುಕಾಡಿ ನಿಶ್ಚಯಮಾಡಿರುವರೋ ?

ಉತ್ತರ—ಸಾಧ್ಯವಾದಷ್ಟು ದೂರ ಹುಡುಕಿರುವರು. ಅದರಲ್ಲಿ ಲೋಪವೇನೂ ಕಂಡುಬರುವುದಿಲ್ಲ. ಒಂದುವೇಳೆ ಸತ್ತ ಹೆಂಗುಸು ಇಲ್ಲಿಯವಳೇ

ಆಗುವುದಾದರೆ, ಆಕೆಯ ಮನೆಯವರು ಈ ಸಂಗತಿಯನ್ನೇ ಮುಚ್ಚಿರಬೇಕು. ಹಾಗಿರುವುದಾದರೆ ಯಾಮಿಕರದೇನು ತಪ್ಪಿರುವುದು ?

ಪ್ರಶ್ನೆ—ಅದು ಹೋಗಲಿ ; ಹೆಂಗುಸು ಈ ಸ್ಥಳದವಳಲ್ಲವೆಂದು ನಿರ್ಧರ ಮಾಡುವುದಕ್ಕಾದೀತೆ ?

ಉತ್ತರ—ಆಲೋಚಿಸಿ ನೋಡಿದರೆ ಅವಳು ಇಲ್ಲಿಯವಳಲ್ಲವೆಂದು ಹೇಳಬಹುದು.

ಪ್ರಶ್ನೆ—ಹಾಗಾದರೆ ಮಧುಸೂದನದತ್ತನಿಗೂ ಆಕೆಗೂ ಸಂಬಂಧ ವಿದ್ದಿತೆಂದು ಹೇಳುವುದಕ್ಕಾಗುವುದಿಲ್ಲವೆನ್ನುವುದಾದರೆ ಒಂದೇ ಕಾಲದಲ್ಲಿ ಒಂದೇ ಸ್ಥಳದಲ್ಲಿ ಒಂದೇ ವಿಧವಾದ ಎರಡು ಕೊಲೆಯುಂಟಾಗಲು ಕಾರಣವೇನು ?

ಉತ್ತರ—ಹೀಗೆ ಹೇಳುವುದಾದರೆ ಒಬ್ಬನಿಂದ ಈ ಎರಡು ಕೊಲೆ ಗಳುಂಟಾಗಿರುವುವೆಂದು ಹೇಳುವುದಕ್ಕಾಗುವುದಿಲ್ಲ. ಹೆಂಗುಸನ್ನು ಕೊಂದವನಿಗೂ ಗಂಡಸನ್ನು ಕೊಂದವನಿಗೂ ಆವ ವಿಧವಾದ ಸಂಬಂಧವೂ ಇರುವುದಿಲ್ಲವೆಂದು ನನಗೆ ನಂಬುಗೆ.

ಪ್ರಶ್ನೆ—ಹಾಗಾದರೆ ಮಧುಸೂದನನ್ನು ಕೊಲ್ಲಲು ಕಾರಣವೇನು ?

ಉತ್ತರ—ಮಧುಸೂದನನು ಹಣಗಾರನು, ಅದರ ಮೇಲೆ ಅತಿ ಕೃಪ ಣನು. ಆವನೋ ಹಣದ ಆಸೆಯಿಂದ ಆತನನ್ನು ಕೊಂದಿರಬೇಕು.

ಪ್ರಶ್ನೆ—ಹಣದ ಆಸೆಯೆಂದು ಹೇಳುವುದಾದರೆ, ಮನೆಯಲ್ಲಿ ಹಣ ವೇನಾದರೂ ಕಳುವಾಗಿದೆಯೋ ?

ಉತ್ತರ—ಒಂದು ಕಾಸೂ ಕಳುವಾಗಿಲ್ಲವೆಂದು ವರದಿಯಿಂದ ತಿಳಿಯ ಬರುತ್ತದೆ.

ಪ್ರಶ್ನೆ—ಈಗಲಾದರೋ ಮಧುಸೂದನನ್ನು ಕೊಲ್ಲುವುದರಲ್ಲಿ ಕೊಲೆ ಪಾತಕನಿಗೆ ಆವ ದುರಭಿಸಂಧಿಯೂ ಇಲ್ಲವೆಂದು ಹೇಳೋಣ ; ಮುಂದಕ್ಕಾದರೂ ಹಣವು ತನಗೆ ಬರುವುದೆಂಬ ದುರಾಶೆಯಿಂದ ಕೊಲೆಗಾರನು ಕೊಲೆಯನ್ನು ನಡೆಯಿಸಿರಬಹುದೇ ?

ಉತ್ತರ—ಮಧುಸೂದನನು ಬಾಲ್ಯಾವಸ್ಥೆಯಲ್ಲಿ ಕೇವಲ ದರಿದ್ರನಾಗಿ ದ್ದನು. ಅವನು ಚಿರಂಜೀವಶರ್ಮನ ಆಶ್ರಯದಲ್ಲಿದ್ದುಕೊಂಡು ಓದುಬರೆಹವನ್ನು

ಕಲಿತುಕೊಂಡನು. ಅನಂತರ ದಿನದಿನಕ್ಕೆ ತನ್ನ ವ್ಯವಸಾಯದಿಂದ ಹಣಗಾರ ನಾಗುತಬಂದನು. ಅವನ ಸಂಸಾರದಲ್ಲಿ ಹೆಂಡಿತಿ, ಹನ್ನೆರಡು ವರ್ಷದ ಹೆಣ್ಣು ಮಗಳು, ಹತ್ತು ಹನ್ನೆರಡು ಜನ ದಾಸದಾಸಿಯರು ಹೊರತಾಗಿ ಮತ್ತಾರೂ ಇರಲಿಲ್ಲ. ಮಧುಸೂದನನಿಗೆ ಅನೇಕ ಮಕ್ಕಳಾದುವು, ಆದರೆ ಅವುಗಳಲ್ಲಿ ಆವುದೂ ಬದುಕಲಿಲ್ಲ. ಹುಟ್ಟಿದ ಮಕ್ಕಳುಗಳೆಲ್ಲವೂ ಸತ್ತುಸತ್ತು ಹೋಗು ತ್ತಿದ್ದುದರಿಂದ ಮಧುಸೂದನನ ಹೆಂಡಿತಿಯು ವ್ಯಸನದಿಂದ ಕಾಲಾಧೀನೆಯಾದಳು. ಮೊದಲನೆಯ ಹೆಂಡಿತಿ ಸತ್ತು ಅನೇಕ ವರ್ಷಗಳ ಮೇಲೆ ಅವನು ಮತ್ತೆ ಮದುವೆ ಯಾದನು. ಆಕೆಯಲ್ಲಿ ಒಂದು ಹೆಣ್ಣುಮಗುವಾಗಿ ಅದು ಮೇಲಿಂದ ಮೇಲೆ ಬಳೆಯುತಿದ್ದಿತು.

ಇದು ಹೊರತಾಗಿ ಮಧುಸೂದನನ ಮನೆಯಲ್ಲಿ ಆತನ ಸೋದರ ಅಳಿಯ ನೊಬ್ಬನಿದ್ದನು. ಅವನ ಹೆಸರು ಶಿವಕುಮಾರ. ಶಿವಕುಮಾರನು ವಿದ್ಯಾವಂತ ನಾದ ಹುಡುಗ, ವಿಶ್ವವಿದ್ಯಾಲಯದಲ್ಲಿ ವ್ಯಾಸಂಗಮಾಡಿ ಉಪಾಧಿಯನ್ನು ಧಾರಣ ಮಾಡಿದ್ದನು. ಅವನು ಮೊದಲಿನಿಂದಲೂ ಸೋದರಮಾವನ ಗೃಹದಲ್ಲಿಯೇ ಬಳೆ ಯುತ್ತಿದ್ದನು. ಅಡಿಗಡಿಗೂ ಮಾವನಿಗೆ ಆಯಾ ಕಾರ್ಯಗಳಲ್ಲಿ ಸಹಾಯನಾಗು ತಿದ್ದನು. ಅದರಿಂದ ಅವನಿಗೆ ಎರಡು ಕಾಸು ಸಿಕ್ಕುತ್ತಿತ್ತು. ಈ ರೀತಿಯಾದ ಸಂಗತಿಗಳನ್ನು ನಾನು ಯಾಮಿಕರ ವರದಿಯಿಂದ ತಿಳಿದೆನು.

ಈ ರೀತಿಯಲ್ಲಿ ನಾನು ನಾನಾಪ್ರಕಾರವಾಗಿ ಆಲೋಚಿಸಿ ಆಲೋಚಿಸಿ ಕೊನೆಗೆ ನಿದ್ರೆಹೋಗುವುದರಲ್ಲಿದ್ದೆನು. ಅಷ್ಟು ಹೊತ್ತಿಗೆ ಸರಿಯಾಗಿ ನನ್ನ ಹೆಂಡಿತಿಯು ಆಹಾರವನ್ನು ತೆಗೆದುಕೊಂಡು ನಾನಿದ್ದಲ್ಲಿಗೆ ಬಂದಳು. ಆಕೆಯು ಬಂದಕೂಡಲೆ ನಾನಿದ್ದ ಸ್ಥಿತಿಯನ್ನು ನೋಡಿ—ಇದೇನು ? ಹೀಗೆ ಆಲೋಚಿಸು ವುದಾದರೆ ಹುಚ್ಚು ಹಿಡಿಯುವುದಿಲ್ಲವೆಂದರೇನು ? ಸುಂಕನಹಳ್ಳಿಗೆ ಹೋಗುವುದು ಮರತೇಹೋದಂತಿದೆ.

ನಾನು ಕೊಂಚ ನಾಚುಗೆಗೊಂಡವನಾಗಿ—ಇಲ್ಲ, ಇಲ್ಲ, ಮರೆಯಲಿಲ್ಲ. ಆದರೆ ಮರೆಯುವುದಕ್ಕೆ ಪ್ರಾರಂಭವಾಗಿದ್ದಿತು,—ಎಂದು ಹೇಳಿಬಿಟ್ಟು ಸರಸರನೆ ಎದ್ದು ಊಟಮಾಡಿದೆನು. ನನ್ನ ಹೆಂಡಿತಿಯೂ ನನ್ನ ಭೋಜನಾನಂತರದಲ್ಲಿ ಊಟಮಾಡಿ ಸುಂಕನಹಳ್ಳಿಗೆ ಹೋಗಲು ಸಿದ್ಧಳಾದಳು. ನಾವಿಬ್ಬರೂ ಗಾಡಿಯಲ್ಲಿ ಕುಳಿತು ಹೊರಟೆವು. ದಾರಿಯಲ್ಲಿ ಹೋಗುತ್ತಿರುವಾಗ ನನ್ನ ಹೆಂಡಿತಿಯು—ನಾವು ಪಯಣಬಳೆಯಿಸಿದ ಉದ್ದೇಶವೇನು ? ಈಗ ಹೇಳಿ ನೋಡೋಣ ಎಂದಳು.

ನಾನು—ಮೊದಲು ಅನಂತಪುರಕ್ಕೆ ಹೋಗಿ ಅನಂತರ ಸುಂಕನಹಳ್ಳಿಗೆ ಬಂದು, ಅಲ್ಲಿ ದೇವರ ದರ್ಶನವನ್ನು ಮಾಡಿಕೊಂಡು ಮನೆಗೆ ಹೊರಡೋಣ.

ಹೆಂಡಿತಿ—(ಆಶ್ಚರ್ಯದಿಂದ) ಅನಂತಪುರ! ಅನಂತಪುರದಲ್ಲಿ ನಾನು ಆರ ಹತ್ತಿರಕ್ಕೆ ಹೋಗಬೇಕು.

ನಾನು—ಅಲ್ಲಿ ಶಿವಶಂಕರಶಾಸ್ತ್ರಿಗಳೆಂಬುವರ ಮನೆ ಇರುವುದಂತೆ. ಆ ಮನೆಗೆ ನೀನು ಹೋಗಿಬರಬೇಕು.

ಹೆಂಡಿತಿ—ಅದೇಕೆ !

ನಾನು—ಶಿವಶಂಕರಶಾಸ್ತ್ರಿ ಈಗ ಬದುಕಿಲ್ಲ. ಆತನ ಮಗಳನ್ನು ಭುವನೇಶ್ವರೀ ಮಾರ್ಗದಲ್ಲಿ ವಾಸವಾಗಿದ್ದ ವಿಶ್ವನಾಥನಿಗೆ ಕೊಟ್ಟು ವಿವಾಹವಾಗಿದ್ದಿತು. ಈಗ ವಿಶ್ವನಾಥನೂ ಬದುಕಿಲ್ಲ. ವಿಧವೆಯು ತಂದೆಯ ಮನೆಯಲ್ಲಿರುವಳೇ ಇಲ್ಲವೇ ಮತ್ತೆಲ್ಲಿರುವಳು, ಎಂಬ ಅಂಶವನ್ನು ತಿಳಿದುಕೊಳ್ಳಬೇಕಾಗಿದೆ. ಒಂದು ವೇಳೆ ತೌರುಮನೆಯಲ್ಲಿರುವುದಾದರೆ ಆವ ರೀತಿಯಲ್ಲಿರುವಳು? ಅವಳ ತಾಯಿ ಬದುಕಿರುವಳೆ? ಸಂಸಾರ ಯಾತ್ರೆಯು ಆವ ರೀತಿಯಲ್ಲಿ ಜರುಗುತ್ತಿರುವುದು, ಎಂಬುದು ಗೊತ್ತಾಗಬೇಕು. ಇದಲ್ಲದೆ ಆಕೆಯ ಅತ್ತೆಯ ಮನೆ ಎಲ್ಲಿದೆ? ಆಕೆಯು ಎಷ್ಟು ದಿವಸದಿಂದ ಅನಂತಪುರದಲ್ಲಿ ವಾಸವಾಗಿರುವಳು? ಅವಳ ಗಂಡನಿಗಿದ್ದ ಆಸ್ತಿಪಾಸ್ತಿಗಳೆಲ್ಲವೂ ಏನಾದವು? ಎಂಬ ವಿಷಯದಲ್ಲಿ ಎಷ್ಟು ಸಾಧ್ಯವೋ ಅಷ್ಟು ತಿಳಿದುಕೊಂಡು ಬರಬೇಕು. ಮತ್ತೂ ಆ ಮಾತು ಈ ಮಾತು ಆಡುತ ಆಕೆಯನ್ನು ಹೊರಗೆ ಕರೆದುಕೊಂಡು ಬಾ. ನಾನು ಆಕೆಯನ್ನು ಒಂದು ಸಲ ನೋಡಬೇಕು.

ಹೆಂಡಿತಿ—ಇದರಿಂದ ನಿಮಗೆ ಪ್ರಯೋಜನವೇನು?

ನಾನು—ಆವ ವಿಷಯದಲ್ಲಿ ನಮಗೆ ಸಂಶಯ ತೋರಿಬರುವುದೋ, ಅದನ್ನು ಪರಿಶೀಲಿಸಿ ತಿಳಿಯುವುದಕ್ಕೆ ಯತ್ನಮಾಡಿರುವೆನು. ಶಿವಶಂಕರಶಾಸ್ತ್ರಿಯ ಮನೆಯಲ್ಲಿ ಆತನ ಹೆಂಡಿತಿ ಮತ್ತು ಮಗಳು ಇವರಿಬ್ಬರು ಹೊರತಾಗಿ ಮತ್ತಾರೂ ಗಂಡು ದಿಕ್ಕಿಲ್ಲವೆಂದು ನಾನು ಕೇಳಿರುವೆನು.

ಹೆಂಡಿತಿ—ಅವರಿಗೆ ಮತ್ತಾರೂ ಪೋಷಕರಿಲ್ಲವೆ?

ನಾನು—ಅದು ನನಗೆ ಚೆನ್ನಾಗಿ ಗೊತ್ತಿಲ್ಲ. ಅವರ ಮನೆ ಮಟ, ಅವರು ಬದುಕಿರುವರೋ ಇಲ್ಲವೋ ಎಂಬುದು ಆವುದೂ ಗೊತ್ತಿಲ್ಲ.

ಹೆಂಡಿತಿ—ಮನೆ ಎಲ್ಲಿ ಎಂಬುದಾದರೂ ಗೊತ್ತಿರುವುದೇ?

ನಾನು—ಇಲ್ಲ, ಆದೂ ಗೊತ್ತಿಲ್ಲ.

ಹೆಂಡಿತಿ—ಹಾಗಾದರೆ ಗತಿ ?

ನಾನು - ನನಗೆ ಎಷ್ಟು ಗೊತ್ತೋ ಅಷ್ಟು ನಿನಗೆ ಹೇಳಿದೆನು.

ಈ ರೀತಿಯಲ್ಲಿ ಗಂಡಹೆಂಡಿರು ಕಥೋಪಕಥೆಗಳನ್ನಾಡುತ್ತಾ ಅನಂತ ಪುರಕ್ಕೆ ಬಂದು ಸೇರಿದರು.

---

## ಐದನೆಯ ಅಧ್ಯಾಯ

ನಾವು ಅಲ್ಲಿಗೆ ಹೋಗಿ ವಿಚಾರಿಸಿದುದರಲ್ಲಿ, ಶಿವಶಂಕರಶಾಸ್ತ್ರಿಯ ಮರಣಾ ನಂತರ, ಆತನ ವಿಧವೆಯಾದ ಹೆಂಡಿತಿಯು ಹೊಟ್ಟೆಗೆ ಮಾರ್ಗವಿಲ್ಲದುದರಿಂದ ತನ್ನ ಮನೆಯನ್ನು ಆರಿಗೋ ಒಬ್ಬರಿಗೆ ಮಾರಿಬಿಟ್ಟಿದ್ದಳೆಂದು ಗೊತ್ತಾಯಿತು. ಮನೆಯನ್ನು ಮಾರಿಬಿಟ್ಟನಂತರದಲ್ಲಿ ತಾಯಿಮಕ್ಕಳಿಬ್ಬರೂ ಎಲ್ಲಿಗೆ ಹೋದರೋ ಆರಿಗೂ ತಿಳಿಯದು. ನಾವಿಬ್ಬರೂ ನಿರಾಶರಾದರೂ ಅದನ್ನು ಲೆಕ್ಕಿಸದೆ ಸುಂಕನ ಹಳ್ಳಿಗೆ ಬಂದೆವು. ಅಲ್ಲಿ ಅನಾಯಾಸವಾಗಿ ದೇವರ ಸಂದರ್ಶನವು ಚೆನ್ನಾಗಿಯಾ ಯಿತು. ನಾವು ಆವ ಉದ್ದೇಶದಿಂದ ಮನೆಬಿಟ್ಟು ಹೊರಟೆವೋ ಆ ಕೆಲಸವು ಆಗದೆ ನಾವು ಸ್ವಪ್ನದಲ್ಲಿಯೂ ಊಹಿಸದೇ ಇದ್ದ ಮತ್ತೊಂದು ಕೆಲಸವು ಕೈಗೂಡಿದುದಕ್ಕಾಗಿ ಬಹಳವಾಗಿ ಸಂತೋಷಪಟ್ಟೆವು. ನನ್ನ ಕೆಲಸವು ಕೈಗೂಡ ಲಿಲ್ಲವೆಂಬ ವ್ಯಸನದಿಂದ ನನ್ನ ಮನಸ್ಸು ಚಂಚಲವಾಗಿರುವಾಗ, ನನಗೆ ದೇವರ ಸಂದರ್ಶನದಲ್ಲಿ ಅಷ್ಟು ಆಶೆಯಿಲ್ಲದಿದ್ದರೂ, ಹೆಂಡಿತಿಯ ಸಂತೋಷಕ್ಕಾಗಿ ನಾನು ದೇವರ ದರ್ಶನದಿಂದ ಸಂತೋಷಪಟ್ಟೆನು. ನನಗಾದರೋ ದೇವರಲ್ಲಿ ಪರಮ ಭಕ್ತಿಯುಂಟು. ದೇವರ ದರ್ಶನವನ್ನು ಮಾಡಕೂಡದೆಂಬ ಆಗ್ರಹವು ನನ್ನ ಜನ್ಮದಲ್ಲಿಗಲಿಲ್ಲ. ಆದರೆ ಆವುದಕ್ಕೂ ಕಾಲಾಕಾಲವಿರುವದು. ಅಕಾಲದಲ್ಲಿ ಮಾಡಿದ ಕೆಲಸವು ಅಷ್ಟು ಸಮರ್ಪಕವಾಗಿರಲಾರದೆಂದು ನನಗೆ ನಂಬುಗೆ ಯಿದ್ದಿತು. ಆದುದರಿಂದ ಪ್ರಕೃತದಲ್ಲಿ ನನಗೆ ದೇವರ ಸೇವೆಯು ಅಷ್ಟು ಸಮ ರ್ಪಕವಲ್ಲದಿದ್ದರೂ, ಇತರರಿಗೋಸ್ಕರವಾಗಿಯಾದರೂ ನಟಿಸಬೇಕಾಗಿ ಬಂದು ಸೇರಿತು. ಮನಃಪೂರ್ವಕವಾಗಿಯಾಗಲಿ, ಇತರರ ಸಂತೋಷಕ್ಕಾಗಿಯಾಗಲಿ ದೇವರ ದರ್ಶನವಾಗುವುದೇ ನಮಗೆ ಬೇಕಾದುದು. ಅದರಿಂದ ಪುಣ್ಯಬರುವದೇ ಹೊರತು ಪಾಪವೆಂದಿಗೂ ಬರಲಾರದು.

ನಾವಿಬ್ಬರೂ ಯಥಾಯೋಗ್ಯವಾಗಿ ಪರಮಾತ್ಮನನ್ನು ಸೇವಿಸಿ ಹೊರಗೆ ಬಂದು ಉತ್ಸವಮಂಡಪದಲ್ಲಿ ಕೊಂಚಹೊತ್ತು ವಿಶ್ರಮಿಸಿಕೊಳ್ಳೋಣವೆಂದು ಆಲೋಚಿಸಿ ಕುಳಿತೆವು. ಅಲ್ಲಿ ಒಬ್ಬ ಬೈರಾಗಿಯು ಕುಳಿತಿದ್ದನು. ಆತನ

ಮುಂದುಗಡೆ ಒಬ್ಬ ಹೆಂಗುಸು ಕುಳಿತುಕೊಂಡು ಗಳಗಳನೆ ಅಳುತ್ತಿದ್ದಳು. ಆಗಿಂದಾಗ, 'ಅಯ್ಯೋ! ಮಗು! ಎಲ್ಲಿಗೆ ಹೋದೆ? ನನ್ನನ್ನು ಕಾಪಾಡುವವರಾರು? ನನ್ನನ್ನು ನಡುನೀರಿನಲ್ಲಿ ಕೈಬಿಟ್ಟೆಯಾ? ಅಯ್ಯೋ!' ಎಂದು ಗೋಳಾಡುತ್ತಿದ್ದಳು.

ನಾನು ಇದನ್ನು ಕೇಳಿ ನನ್ನ ಹೆಂಡಿತಿಗೆ—ಈಕೆ ಯಾರು, ಈಕೆಯ ವಾಸ ಸ್ಥಾನವೆಲ್ಲಿ, ಈಕೆಯ ಮಗುವಿನ ವಿಷಯವೇನು? ಎಂಬುದನ್ನು ಕೇಳಿ ತಿಳಿದು ಕೊಂಡು ಬರುವಂತೆ ಹೇಳಿದೆನು. ಆಕೆಯು ಆ ಮುದುಕಿಯ ಹತ್ತಿರಕ್ಕೆ ಹೋಗಿ ಮಾತನಾಡಿಸಿದಳು. ಮೊದಲು ಮೊದಲು ಮುದುಕಿಯು ವ್ಯಸನದಿಂದ ಆವ ಮಾತನ್ನೂ ಆಡಲಿಲ್ಲ. ಕೊಂಚ ಹೊತ್ತಿನ ಮೇಲೆ ಮನಸ್ಸಿನ ಆವೇಗವು ಕಡಮೆ ಯಾಗಲು, ಮುದುಕಿಯು ನನ್ನ ಹೆಂಡಿತಿಯೊಡನೆ ಮಾತನಾಡಲಾರಂಭಿಸಿದಳು. ನಾನು ದೂರದಲ್ಲಿದ್ದುಕೊಂಡೇ ಮುದುಕಿಯ ಹೃದಯಾಭಿಪ್ರಾಯವನ್ನು ತಿಳಿದು ಕೊಳ್ಳುತ್ತಿದ್ದೆನು.

ಪತ್ತೇದಾರರಾಗತಕ್ಕವರು ಇದೊಂದು ವಿದ್ಯೆಯನ್ನು ಚೆನ್ನಾಗಿಯೂ ತಿಳಿಯಬೇಕು. ದೂರದಲ್ಲಿದ್ದುಕೊಂಡೇ ಇತರರ ಆಕಾರ ಪ್ರಕಾರಗಳನ್ನೂ ಹಾವ ಭಾವಗಳನ್ನೂ ತಿಳಿದು ಅವುಗಳ ಮುಖಾಂತರ ಇತರರ ಮನೋಭಿಪ್ರಾಯಗಳನ್ನು ತಿಳಿಯಬೇಕು. ಇದು ತಿಳಿಯುವುದಕ್ಕೆ ಆಗದೇ ಹೋದರೆ ಅನೇಕ ಸಂದರ್ಭ ಗಳಲ್ಲಿ ಕೆಲಸವು ಕೆಟ್ಟುಹೋಗುವುದು.

ನನ್ನ ಹೆಂಡಿತಿಯು ಮುದುಕಿಯ ಹತ್ತಿರ ಮಾತನಾಡಿ ಹಿಂದಿರುಗಿ ಬಂದು ನಡೆದ ಸಂಗತಿಯೆಲ್ಲವನ್ನೂ ತಿಳಿಸಿದಳು. ಅದನ್ನು ನಮ್ಮ ಪ್ರಿಯಪಾಠಕರ ಅವ ಗಾಹನೆಗಾಗಿ ಇಲ್ಲಿ ವಿವರಿಸುವೆನು.

ಮೊದಲು ನನ್ನ ಹೆಂಡಿತಿಯು ವೃದ್ಧೆಯನ್ನು ಸಮಾಧಾನಪಡಿಸಿ-ಅಮ್ಮಾ ನೀನಾರಮ್ಮ? ಎಂದು ಕೇಳಿದಳು.

ವೃದ್ಧೆಯು—ನಾನು ಈ ಸುಂಕನಹಳ್ಳಿಯಲ್ಲಿ ವಾಸವಾಗಿರುವೆನು, ಎಂದು ಉತ್ತರವಿತ್ತಳು.

ಹೆಂಡಿತಿ— ಸುಂಕನಹಳ್ಳಿಯೇ ನಿಮ್ಮ ಸ್ಥಳ?

ವೃದ್ಧೆ—ಅಲ್ಲಮ್ಮ.

ಹೆಂಡಿತಿ—ನಿಮ್ಮ ಸ್ಥಳವಾವುದು?

ವೃದ್ಧೆ—ಅನಂತಪುರದಲ್ಲಿ ನಮ್ಮ ಮನೆಯಿತ್ತು.

ಈ ಮಾತನ್ನು ಕೇಳಿ ನನ್ನ ಹೆಂಡಿತಿಗೆ ಶಿವಶಂಕರಶಾಸ್ತ್ರಿಯ ಹೆಸರು ಜ್ಞಾಪಕಕ್ಕೆ ಬಂದಿತು. ಅನಂತರ,-ಈಗ ಆ ಮನೆಯಿಲ್ಲವೆ? ಎಂದು ನನ್ನ ಹೆಂಡಿತಿಯು ಮುದುಕಿಯನ್ನು ಕೇಳಲಾಗಿ ಮುದುಕಿಯು,—ಇಲ್ಲ, ಇದ್ದ ಒಂದು ಮನೆಯನ್ನು ಮಾರಿದೆನು, ಎಂದು ಉತ್ತರವಿತ್ತಳು.

ಹೆಂಡಿತಿ—ಹಾಗೇನು! ನಿಮ್ಮನ್ನು ನೋಡಿದರೆ ಶಿವಶಂಕರ ಶಾಸ್ತ್ರಿಗಳ ಕುಟುಂಬವೆಂದು ತೋರಿಬರುವುದು.

ವೃದ್ಧೆ—ಮಗು! ನಿನಗೆ ಗೊತ್ತಾದ ಬಗೆ ಹೇಗಮ್ಮ?

ಹೆಂಡಿತಿ—ಅದನ್ನು ಆ ಮೇಲೆ ಹೇಳುವೆನು. ನಿಮಗೆ ಮಗಳೊಬ್ಬಳು ಇದ್ದಳಲ್ಲವೆ? ಆಕೆಯೆಲ್ಲಿ?

ಈ ಮಾತನ್ನು ಕೇಳಿದೊಡನೆಯೇ ಮುದುಕಿಯು ಮಗಳ ಹೆಸರನ್ನೆತ್ತಿ ಗೊಳೋ ಎಂದು ಅತ್ತು ಅತ್ತು ಸತ್ತು ಸುಣ್ಣವಾದಳು. ನನ್ನ ಹೆಂಡಿತಿಯು ಮತ್ತೆ ಆಕೆಯನ್ನು ಸಮಾಧಾನಪಡಿಸಿ,—ಈಗ ನಿಮ್ಮ ಮಗಳಿರುವುದೆಲ್ಲಿ? ಎಂದು ಕೇಳಿದಳು.

ವೃದ್ಧೆ—ನಾನು ಅವಳನ್ನು ಎರಡು ದಿನದಿಂದಲೂ ಕಾಣಲಿಲ್ಲ. ಎಲ್ಲಿಗೆ ಹೋದಳೋ, ಏನಾದಳೋ, ನಾನು ಕಾಣೆನಮ್ಮ.

ಹೆಂಡಿತಿ—ನೀವು ನನ್ನ ಜತೆಯಲ್ಲಿ ಬರುವುದಾದರೆ, ನಿಮ್ಮ ಮಗಳು ಎಲ್ಲಿರುವಳೆಂಬುದನ್ನು ಪತ್ತೆಮಾಡಿಸಿ ಕೊಡುವೆನು.

ವೃದ್ಧೆ—(ಆತುರದಿಂದ) ನೀನಾರಮ್ಮ, ನೀನಿರುವುದೆಲ್ಲಮ್ಮ?

ನನ್ನ ಹೆಂಡಿತಿಯು ತನ್ನ ಪರಿಚಯವನ್ನು ಮುದುಕಿಗೆ ತಿಳಿಸಿದಳು. ಮುದುಕಿಯು ಕೊಂಚ ಮಟ್ಟಿಗೆ ಧೈರ್ಯವನ್ನು ಹೊಂದಿದವಳಾಗಿ ನನ್ನ ಹೆಂಡಿತಿಯ ಸಂಗಡ ಹೊರಡಲು ಅಸಮ್ಮತಿಯನ್ನು ತೋರಿಸಲಿಲ್ಲ.

ಇದಾದ ಕೂಡಲೆ ಮುದುಕಿಯು ನನ್ನ ಹೆಂಡಿತಿಯನ್ನು ಸಮೀಪದ ಒಂದು ಹಳ್ಳಿಯಲ್ಲಿದ್ದ ತನ್ನ ಮನೆಗೆ ಕರೆದುಕೊಂಡು ಹೋದಳು. ಅಲ್ಲಿ ಮುದುಕಿಯು ನನ್ನ ಹೆಂಡಿತಿಯ ಸಲಹೆಯ ಮೇರೆ ತನ್ನಲ್ಲಿದ್ದ ಮನೆಯ ಸಾಮುಗ್ರಿಗಳೆಲ್ಲವನ್ನೂ ತೆಗೆದುಕೊಂಡು ಹೊರಡಲು ಸಿದ್ಧಳಾದಳು. ನಾನು ಇದನ್ನು ದೂರದಿಂದ ನೋಡುತಿದ್ದು, ಆ ಕೂಡಲೆ ಒಬ್ಬ ಯಾಮಿಕನನ್ನು ಕರೆದು ಬೇಗನೆ ಆ ಹೆಂಗುಸರಿಬ್ಬರಿಗೆ

ಗಾಡಿಯೊಂದನ್ನು ಮಾಡಿಕೊಡುವಂತೆ ಹೇಳಿದೆನು. ಗಾಡಿಯು ಬಂದೊಡನೆ ಹೆಂಗುಸರಿಬ್ಬರೂ ಗಾಡಿಯಲ್ಲಿ ಕುಳಿತು ಮನೆಯ ಕಡೆಗೆ ತೆರಳಿದರು. ನಾನು ಬೇರೊಂದು ಗಾಡಿಯಲ್ಲಿ ಕುಳಿತು ಅವರ ಹಿಂದೆ ಹಿಂದೆಯೇ ತೆರಳಿದೆನು.

---

## ಆರನೆಯ ಅಧ್ಯಾಯ

ಮುದುಕಿಯೂ ನನ್ನ ಹೆಂಡಿತಿಯೂ ಗಾಡಿಯಲ್ಲಿ ಕುಳಿತುಕೊಂಡು ಮನೆಗೆ ತೆರಳಿದರು. ದಾರಿಯಲ್ಲಿ ಅವರಿಬ್ಬರಿಗೂ ಬಹಳವಾಗಿ ಕಥೋಪಕಥೆಗಳು ನಡೆದುವು. ವೃದ್ಧೆಯು ಹೇಳಿದ ಅನೇಕ ಸಂಗತಿಗಳನ್ನು ಈ ಕೆಳಗೆ ವಿವರಿಸುವೆನು.

"ನಮ್ಮ ಯಜಮಾನರು ಕೇವಲ ದರಿದ್ರರಾಗಿದ್ದುದರಿಂದ ಸಂಸಾರ ಜರುಗುವುದೇ ಬಹಳ ಕಷ್ಟವಾಗಿದ್ದಿತು. ಆದುದರಿಂದ ಅವರು ನಮ್ಮ ಮಗಳಾದ ಸರಳಕುಮಾರಿಯನ್ನು ಹಣಗಾರನೆನಿಸಿದ ವೃದ್ಧನಾದ ವಿಶ್ವನಾಥರಾಯನಿಗೆ ಕೊಟ್ಟು ವಿವಾಹ ಮಾಡಿದರು. ನಮ್ಮ ಮಗಳು ಗಂಡನ ಮನೆಯಲ್ಲಿ ಬಾಳುವುದಕ್ಕೆ ಮೊದಲು ಮಾಡಿದಾಗಿನಿಂದಲೂ, ಆಕೆಯು ನಮ್ಮ ಸಂಸಾರಕ್ಕಾಗಿ ತಿಂಗಳಿಗೆ ಹತ್ತು ರೂಪಾಯಿಗಳನ್ನು ಕಳುಹಿಸಿ ಕೊಡುತ್ತಿದ್ದಳು. ನಮ್ಮ ಮಗಳಿಗೆ ಗಂಡು ಮಗುವಾಗಲೀ, ಹೆಣ್ಣು ಮಗುವಾಗಲೀ ಆವದೂ ಆಗಲಿಲ್ಲ. ನಮ್ಮ ಮಗಳು ಆತನಿಗೆ ಮೂರನೆಯ ಹೆಂಡಿತಿ. ವಿಶ್ವನಾಥನಿಗೆ ಆವ ಹೆಂಡಿತಿಯಿಂದಲೂ ಮಕ್ಕಳೆಂಬುದೇ ಆಗಲಿಲ್ಲ.

ವಿಶ್ವನಾಥನಿಗೆ ಎಷ್ಟರ ಮಟ್ಟಿನ ಆಸ್ತಿಯಿದ್ದಿತೆಂಬುದನ್ನು ಆತನು ತನ್ನ ಹೆಂಡಿತಿಗೂ ತಿಳಿಸಿರಲಿಲ್ಲ. ಸರಳಕುಮಾರಿಗಂತೂ ತನ್ನ ಗಂಡನು ಲಕ್ಷಾಧಿಕಾರಿಯೆಂಬುದು ಗೊತ್ತೇ ಇರಲಿಲ್ಲ. ಅಕ್ಕಪಕ್ಕದ ಮನೆಯ ಹೆಂಗುಸರು, 'ನಿನ್ನ ಗಂಡನಿಗೆ ವಿಪರೀತವಾದ ಆಸ್ತಿ ಇದ್ದರೂ ನಿನ್ನ ಮೈಮೇಲೆ ಒಂದು ಕಾಸಿನಷ್ಟು ಬಂಗಾರದ ಒಡವೆ ಇಲ್ಲದಿರುವುದು ನೋಡಿದರೆ ಆಶ್ಚರ್ಯವಾಗುವುದು,' ಎಂದು ನಮ್ಮ ಹುಡುಗಿಗೆ ಹೇಳಿರುವರು. ನನ್ನ ಮಗಳಿಗೆ ಮಾತ್ರ ತನ್ನ ಗಂಡನ ಆಸ್ತಿ ವಿಷಯವಾಗಿ ಏನೂ ಗೊತ್ತಿರಲಿಲ್ಲ. ತನಗಿಲ್ಲದ್ದು ತನ್ನ ಗಂಡನ ಬಳಿಯಲ್ಲಿ ಎಷ್ಟಿದ್ದರೇನೆಂದು ಹೆಂಡಿತಿಯಾದವಳು ತಿಳಿದು ಸುಮ್ಮನೆ ಇರುತ್ತಿದ್ದಳು.

ವಿಶ್ವನಾಥನು ಕೃಪಣನಾದರೂ ತನ್ನ ಹೆಂಡಿತಿಯನ್ನು ಅಧಿಕವಾಗಿ ಪ್ರೀತಿಸುತ್ತಿದ್ದನು. ಹಣಕಾಸುಗಳನ್ನೂ, ಒಡವೆ ವಸ್ತುಗಳನ್ನೂ, ಅನ್ನಬಟ್ಟೆಗಳನ್ನೂ ಬಿಟ್ಟು ಆರು ಆರನ್ನು ಬೇಕಾದರೂ ಬೇಕಾದಷ್ಟು ಪ್ರೀತಿಸಬಹುದು. ಇದೇ ರೀತಿಯಲ್ಲಿಯೇ ವಿಶ್ವನಾಥನು ತನ್ನ ಹೆಂಡಿತಿಯನ್ನೂ ಪ್ರೀತಿಸುತ್ತಿದ್ದುದು.

ವಿಶ್ವನಾಥನಿಗೆ ಮನೆಹೊರತು ಸ್ಥಿರಸ್ವತ್ತು ಮತ್ತಾವುದೂ ಇರಲಿಲ್ಲ. ಸರಳಕುಮಾರಿಯು ಅವಳ ಹದಿನೆಂಟನೆಯ ವರ್ಷದಲ್ಲಿ ವಿಧವೆಯಾದಳು. ಗಂಡನು ಮುದುಕನಾಗಿದ್ದರೂ ಆತನನ್ನು ಅವಳು ಬಹಳವಾಗಿ ಪ್ರೀತಿಸುತ್ತಿದ್ದಳು. ಯೌವನಸ್ಥರಾದ ಅನೇಕ ಯುವತಿಯರು ತಮ್ಮ ತಮ್ಮ ಗಂಡಂದಿರನ್ನು ಇವಳಷ್ಟು ಚೆನ್ನಾಗಿ ಪ್ರೀತಿಸುತ್ತಿದ್ದರೊ ಇಲ್ಲವೋ ಖಂಡಿತವಾಗಿಯೂ ತಿಳಿದು ಹೇಳುವುದಕ್ಕಾಗುವುದಿಲ್ಲ. ನನ್ನ ಮಗಳಿಗೆ ಬೇಕಾಗಿದ್ದುದು ಗಂಡನ ವಿಶ್ವಾಸವೇ ಹೊರತು ಗಂಡನ ಹಣಕಾಸುಗಳಲ್ಲ. ಆದುದರಿಂದಲೇ ಆಕೆಯು ಆವಾಗಲೂ ಗಂಡನ ಹಣದ ವಿಷಯದಲ್ಲಿ ಮಾತನಾಡಿದವಳೇ ಅಲ್ಲ. ಕೃಪಣನಾದ ಗಂಡನೂ ಹೆಚ್ಚಾಗಿ ಮಾತನಾಡಿಸಿದರೆ ಎಲ್ಲಿ ವೆಚ್ಚಕ್ಕೆ ಬರುತ್ತದೆಯೋ ಎಂದು ಹೆಂಡಿತಿಯೊಡನೆ ವಿಶೇಷವಾಗಿ ಮಾತನಾಡುತ್ತಿರಲಿಲ್ಲ. ಈ ರೀತಿಯಲ್ಲಿ ಕೆಲವು ಕಾಲ ಸಂಸಾರ ಮಾಡಿಕೊಂಡಿರುತ್ತಿದ್ದು, ವಿಶ್ವನಾಥನು ತನ್ನ ಅರವತ್ತನೆಯ ವರ್ಷದಲ್ಲಿ ಮಡಿದನು.

ರಾಮರಾಜ ಮೊಹಲ್ಲೆಯಲ್ಲಿ ವಾಸ ಮಾಡಿಕೊಂಡಿದ್ದ ಮಧುಸೂದನ ಶರ್ಮನೆಂಬೊಬ್ಬ ದೊಡ್ಡ ಮನುಷ್ಯನು ಪ್ರಾಯಿಕವಾಗಿ ವಿಶ್ವನಾಥನೊಡನೆ ಆವಾಗಲೂ ಇರುತ್ತಿದ್ದನು; ಆಗಾಗ ಆತನಿಂದ ಹಣದ ಸಾಲವನ್ನು ತೆಗೆದುಕೊಳ್ಳುತ್ತಿದ್ದನು. ಆತನು ಯೋಗ್ಯನಂತೆ ಸಾಲ ತೀರಿಸುತ್ತಿದ್ದನು. ಮಧುಸೂದನನು ನಾನಾಪ್ರಕಾರವಾದ ವ್ಯಾಪಾರವನ್ನು ಮಾಡಿಕೊಂಡಿರುತ್ತಿದ್ದನಾದ ಕಾರಣ, ಆತನು ಹಣ ಬೇಕಾದಾಗಲೆಲ್ಲ ವಿಶ್ವನಾಥನ ಹತ್ತಿರಕ್ಕೆ ಬಂದು ಬೇಕಾದಷ್ಟು ಹಣವನ್ನು ಕೈ ಸಾಲವಾಗಿ ತೆಗೆದುಕೊಂಡು ಹೋಗುವ ಪದ್ಧತಿಯನ್ನು ಇಟ್ಟುಕೊಂಡಿದ್ದನು.

ವಿಶ್ವನಾಥನಿಗೆ ಮರಣವು ಬಂದುದನ್ನು ಕೇಳಿ, ಮಧುಸೂದನನು ಆ ಕೂಡಲೆ ವಿಶ್ವನಾಥನ ಮನೆಗೆ ಹೋಗಿ ಮಾಡಬೇಕಾದ ಕೆಲಸವೆಲ್ಲವನ್ನೂ ಸಾಂಗೋಪಾಂಗವಾಗಿ ನೆರವೇರಿಸಿ, ಸರಳಕುಮಾರಿಗೆ ಸಮಾಧಾನೋಕ್ತಿಯನ್ನು ಅಡಿಗಡಿಗೂ ಹೇಳುತ್ತಾ, ಆಕೆಯ ಸಂಸಾರ ಭಾರವನ್ನು ತಾನೇ ವಹಿಸಿಕೊಳ್ಳುವುದಾಗಿ ಹೇಳಿದನು.

ಈ ರೀತಿಯಲ್ಲಿ ೨ ವರ್ಷಗಳು ಕಳೆದುವು. ಆ ಮೇಲೊಂದು ದಿನ ಮಧುಸೂದನನು ಸರಳೆಯನ್ನು ಕುರಿತು ಕೆಳಗೆ ಸೂಚಿಸಿರುವಂತೆ ಹೇಳತೊಡಗಿದನು,— "ನಿನ್ನ ಯಜಮಾನನು ಸಾಯುವ ಕಾಲದಲ್ಲಿ ಅಲ್ಪ ಸ್ವಲ್ಪ ಆಸ್ತಿಯನ್ನು ಬಿಟ್ಟು ಹೋದನು. ಆತನ ಹಣವೆಲ್ಲವೂ ಲೇವಾದೇವಿಯ ರೂಪದಲ್ಲಿದ್ದಿತು; ಹತ್ತಿರದಲ್ಲಿದ್ದ ಕೊಂಚ ಹಣವು ಆತನ ಸತ್ಕಾರಕ್ಕಾಗಿಯೇ ವೆಚ್ಚವಾಯಿತೆಂಬುದು

ನೀನೇ ಬಲ್ಲೆ. ಆತನಿಗೆ ಬರಬೇಕಾಗಿದ್ದ ಹಣದ ವಿಷಯದಲ್ಲಿ ನಾನು ಎಷ್ಟೋ ಪ್ರಯತ್ನಮಾಡಿ ನೋಡಿದೆನು. ಪತ್ರಗಳು ಆವುವೂ ಇಲ್ಲದುದರಿಂದ ಎಲ್ಲರೂ ಮೋಸ ಮಾಡಿ ಓಡಿ ಹೋದರು. ಕೊಟ್ಟ ಹಣದಲ್ಲಿ ಒಂದು ಕಾಸೂ ಬರುವಂತೆ ಕಂಡು ಬರುವುದಿಲ್ಲ. ವ್ಯಾಪಾರದಲ್ಲಿ ಕೊಡುವುದೂ ಉಂಟು; ತೆಗೆದುಕೊಳ್ಳುವುದೂ ಉಂಟು. ನಿನ್ನ ಗಂಡ ಮಾಡಿದ ವ್ಯಾಪಾರದಲ್ಲಾದರೋ ಕೊಡುವುದೇ ಹೆಚ್ಚಾಗಿದ್ದಿತು. ಆದುದರಿಂದ ಅನೇಕರು ಆತನ ಮೇಲೆ ವ್ಯವಹಾರ ಮಾಡಿರುವರು. ಇಂದು ನಾಳೆಯೆನ್ನುವುದರೊಳಗಾಗಿಯೇ ಎಲ್ಲರೂ ಒಟ್ಟಾಗಿ ಸೇರಿ ಮುಟ್ಟುಗೊಳು ಹಾಕುವುದಕ್ಕೆ ಬರುವಂತೆ ಕಾಣುತ್ತದೆ. ಇಲ್ಲಿನ ವರೆಗೂ ಮಾನದಿಂದ ಜೀವಿಸಿದುದಾಯಿತು. ಇನ್ನು ಮುಂದೆ ಹಾಗೆ ನಡೆಯಲಾರದು. ನನ್ನ ಪರಮಮಿತ್ರನಾದ ನಿನ್ನ ಗಂಡನಿಗೆ ಸಾಹಾಯ್ಯ ಮಾಡೋಣವೆಂದು ನಾನು ಎಷ್ಟೋ ಪ್ರಯತ್ನ ಮಾಡಿ ನೋಡಿದೆನು. ಅವುದೂ ಸಾಗುವ ಹಾಗಿಲ್ಲ. ಇನ್ನು ಮೇಲೆ ನನ್ನ ಯತ್ನ ಸಾಗದು. ಹೇಗಾದರೂ ಮಾಡಿ ಕುಲದ ಮಾನವನ್ನಾದರೂ ಕಾಪಿಟ್ಟುಕೊಳ್ಳಬೇಕು. ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನಮ್ಮ?"

ಸರಳ ಕುಮಾರಿಯು ಗಂಡನಿಗೆ ಅಪಯಶಸ್ಸು ಬರುವುದೆಂಬ ಕರ್ಣಕಠೋರವಾದ ಮಾತನ್ನು ಕೇಳಿ ಸಹಿಸಲಾರದೆ ಮದುವೆಯ ಕಾಲದಲ್ಲಿ ತನ್ನ ಮೈಮೇಲೆ ಹಾಕಿದ್ದ ಒಂದೆರಡು ಒಡವೆಗಳನ್ನು ತೆಗೆದು ಮಧುಸೂದನನ ಕೈಗೆ ಕೊಟ್ಟು— ಇವುಗಳಿಂದೇನಾದರೂ ಸಾಲ ತೀರುವ ಸಂಭವವುಂಟೆ? ಎಂದು ಕೇಳಿದಳು.

ಮಧುಸೂದನನು ಆ ಒಡವೆಗಳನ್ನು ತೆಗೆದುಕೊಂಡು—ಈ ಒಡವೆಗಳನ್ನು ಮಾರಿ ಬಂದದುದರಲ್ಲಿ ಪ್ರಕೃತ ಬಂದಿರುವ ಕಷ್ಟವನ್ನು ನಿವಾರಣೆ ಮಾಡಿಕೊಳ್ಳಬಹುದು. ಮುಂದೇನಾದರೂ ಈ ರೀತಿ ಬರುವುದಾದರೆ ಏನು ಗತಿ ಎಂದು ನಾನು ಆಲೋಚಿಸುತ್ತಿರುವೆನು, ಎಂದನು.

ಈಗ ಬಂದಿರುವ ಕಷ್ಟವು ಕಳೆಯಲಿ, ಮುಂದೆ ನೋಡಿಕೊಳ್ಳುವ, ಎಂದು ಸರಳೆಯು ಹೇಳಿದ ಮಾತನ್ನು ಕೇಳಿ ಮಧುಸೂದನನು ಹೊರಟು ಹೋದನು. ಮಧುಸೂದನನು ಕೆಲವು ಕಾಲ ಆವ ಮಾತೂ ಆಡದೆ ಬಾಯ ಮುಚ್ಚಿಕೊಂಡು ಸುಮ್ಮನಿದ್ದನು. ಹೀಗಿರಲೊಂದು ದಿನ ಆತನು ಹಠಾತ್ತಾಗಿ ಸಂಧ್ಯಾಕಾಲದಲ್ಲಿ ಸರಳೆಯಿದ್ದಲ್ಲಿಗೆ ಬಂದು—ಸರ್ವನಾಶವಾಗಿ ಹೋಗುವುದರಲ್ಲಿದೆ. ಇನ್ನು ಬದುಕುವ ಹಾಗಿಲ್ಲ. ಹೀಗೆ ಕಷ್ಟಗಳು ಒಂದರ ಮೇಲೊಂದು ಬರುವುದಕ್ಕೆ ಪ್ರಾರಂಭ ಮಾಡಿದರೆ, ಅಸಹಾಯನಾದ ಮನುಷ್ಯನು ಮಾಡುವುದೇನು? ಗ್ರಹಚಾರವು ಇಷ್ಟು ಕ್ರೂರವಾಗಿರುವುದೆಂದು ನಾನೆಂದಿಗೂ ತಿಳಿದಿರಲಿಲ್ಲ. ಈಗ ನಾನೇನ ಮಾಡಬೇಕೋ ತಿಳಿಯದು, ಎಂದು ಮೇಲುಸಿರು ಬಿಡುತ್ತಾ ಹೇಳಿದನು.

ಅದನ್ನು ಕೇಳಿ ಸರಳೆಯು ಭಯದಿಂದ ನಡುಗಿ—ಏನಾಯಿತೆಂದಳು.

ಮಧು—ಆರೋ ಒಬ್ಬನು ನಿನ್ನ ಗಂಡನ ಹೆಸರಿನಲ್ಲಿ ನ್ಯಾಯಸ್ಥಾನಕ್ಕೆ ಹೋಗಿ ವ್ಯವಹಾರ ಮಾಡಿರುವನು.

ಸರಳೆ—ಎಷ್ಟಕ್ಕೆ ?

ಮಧು—೩೨ ಸಾವಿರ ರೂಪಾಯಿಗಳಿಗಂತೆ.

ಸರಳೆಯ ತಲೆಯ ಮೇಲೆ ಸಿಡಿಲು ಬಡಿದಂತಾಗಿ ಆಕೆಯು ತಲೆಯ ಮೇಲೆ ಕೈಗಳನ್ನಿಟ್ಟುಕೊಂಡು ಕುಳಿತುಬಿಟ್ಟಳು. ಕೊಂಚ ಹೊತ್ತು ಚೇತರಿಸಿಕೊಂಡು—ಈಗೇನು ಗತಿ ! ನನಗಂತೂ ದಿಕ್ಕೇ ತೋರುವುದಿಲ್ಲ. ನಮಗಿರುವ ಆಸ್ತಿಯೆಲ್ಲವೂ ಈ ಮನೆಯೊಂದೇ. ಇದನ್ನು ಮಾರಿಯಾದರೂ ಸಾಲ ತೀರಿಸಬೇಕು; ಯತ್ನವಿಲ್ಲ. ಯಜಮಾನರ ಸಾಲವನ್ನು ನಾನೆಂದಿಗೂ ಇಟ್ಟುಕೊಳ್ಳುವುದಕ್ಕೆ ಆಶೆಪಡುವುದಿಲ್ಲ. ನನ್ನ ಸ್ವಾಮಿಯೇ ಹೋದ ಮೇಲೆ ನನಗೆ ಈ ಮನೆಯಿಂದಾಗುವುದೇನು ? ತಾವು ದಯೆಯಿಟ್ಟು ಹೇಗಾದರೂ ಮಾಡಿ ಈ ಮನೆಯನ್ನು ಮಾರಿ ಬಂದ ಹಣದಲ್ಲಿ ಸಾಲವನ್ನು ತೀರಿಸಿ ನನ್ನನ್ನು ಉದ್ಧಾರಮಾಡಿ, ಎಂದು ಅಂಗಲಾಚಿಕೊಂಡಳು.

ಇದನ್ನು ಕೇಳಿ ಮಧುಸೂದನನು—ಇದು ಹೇಗಾದರೂ ಆಗುವುದು. ಅದರ ವಿಷಯದಲ್ಲಿ ನನಗೆ ಕಿಂಚತ್ತೂ ಆಲೋಚನೆಯಿಲ್ಲ. ಇರುವ ಮನೆಯೊಂದು ಮಾರಿಹೋದರೆ ಆ ಮೇಲೆ ನಿನ್ನ ಗತಿಯೇನು? ನೀನು ವಾಸವಾಗಿರುವುದೆಲ್ಲಿ ? ನಿನ್ನ ಯೋಗಕ್ಷೇಮವನ್ನು ವಿಚಾರಿಸುವರಾರು ? ಎಂದು ಹೇಳಿದ ಮಾತನ್ನು ಕೇಳಿ ಸರಳೆಯು—ದೇವರಿದ್ದಾನೆ. ಮುಂದಾಗುವುದೆಲ್ಲವನ್ನೂ ಆತನೇ ನೋಡಿಕೊಳ್ಳುವನು. ಹುಟ್ಟಿಸಿದ ದೇವರು ಕಾಪಿಡಲಾರನೆ, ಎಂದಳು.

ಮಧುಸೂದನನು ಸರಳೆಯ ಪತಿಭಕ್ತಿಯನ್ನು ನೋಡಿಯಾದರೂ ಮನ ಗರಗದವನಾಗಿ, ಆಕೆಯ ಮನೆಯನ್ನೂ ಮಾರಿದನು. ಅನಂತರದಲ್ಲಿ ನಿಲ್ಲುವುದಕ್ಕೆ ಮನೆಯಿಲ್ಲದೆ, ತಿನ್ನುವುದಕ್ಕೆ ಅನ್ನವಿಲ್ಲದೆ, ಉಡುವುದಕ್ಕೆ ಬಟ್ಟೆಯಿಲ್ಲದೆ, ಕೇವಲ ಸಂಕಟಕ್ಕೊಳಗಾಗಿ ಕಟ್ಟಕಡೆಗೆ ಮಧುಸೂದನನ ಮನೆಗೇ ಬಂದು ಸೇರಿಕೊಂಡಳು.

ನಮ್ಮ ಸರಳಕುಮಾರಿಗೆ ಮಧುಸೂದನನ ಮಾತಿನಲ್ಲಿ ತುಂಬಾ ನಂಬುಗೆ ಇದ್ದಿತು. ಆತನು ಏನ ಹೇಳಿದರೂ ಅದಕ್ಕೆ ಪ್ರತಿಯಾಗಿ ಹೇಳದೇ ನಡೆದು ಕೊಳ್ಳುತ್ತಿದ್ದಳು. ಹೀಗೆಯೇ ಕೆಲವು ದಿನಗಳು ಕಳೆದನಂತರ ಮಧುಸೂದನನೊಂದು ದಿನ ರಾತ್ರಿಯಲ್ಲಿ ಗುಪ್ತವಾಗಿ ಸರಳೆಯಿದ್ದಲ್ಲಿಗೆ ಹೋಗಿ ಅತ್ಯಾಚಾರ

ಮಾಡಲೆಣಿಸಲಾಗಿ, ಆಕೆಯು ಆ ಕ್ಷಣವೇ ಆತನ ಮನೆಯನ್ನು ತ್ಯಾಗಮಾಡಿ ಅನಂತಪುರದಲ್ಲಿ ವಾಸವಾಗಿರುತ್ತಿದ್ದ ನನ್ನ ಬಳಿಗೆ ಬಂದು ಸೇರಿದಳು.

ನಮ್ಮ ಅವಸ್ಥೆಯನ್ನು ಕುರಿತು ವಿಶೇಷವಾಗಿ ಅಡಿಗಡಿಗೆ ಹೇಳಬೇಕಾದುದೇನೂ ಇರಲಿಲ್ಲ. ನಮ್ಮದೇ ಹೀಗಿರುವಾಗ ಮಗಳನ್ನು ಕಾಪಿಡುವುದು ಹೇಗೆ? ಏನಾದರೂ ಆಗಲಿ. ಮನೆತಪ್ಪಿದ ಮಗಳನ್ನು ಎಲ್ಲಿಗೆ ಕಳುಹಿಸಬೇಕು? ನನಗೆ ಮತ್ತಾವ ದಿಕ್ಕೂ ತೋಚದೆ ಇದ್ದ ಮನೆಯೊಂದನ್ನು ಮಾರಿ ಸುಂಕನಹಳ್ಳಿಗೆ ಸಮೀಪದಲ್ಲಿರುವ ಒಂದು ಗ್ರಾಮದಲ್ಲಿ ಒಂದು ಹುಲ್ಲಿನ ಗುಡಿಸಲನ್ನು ಬಾಡಿಗೆಗೆ ತೆಗೆದುಕೊಂಡು ಬಹಳ ಕಷ್ಟದಿಂದ ದಿನಗಳನ್ನು ತಳ್ಳುತ್ತಿದ್ದೆವು."

---

## ಏಳನೆಯ ಅಧ್ಯಾಯ

ಸರಳಕುಮಾರಿಯ ತಾಯಿಯು ನನ್ನ ಹೆಂಡಿತಿಯೊಡನೆ ಹೇಳಿದ ಸಂಗತಿಯನ್ನು ನಾನು ಕೇಳಿದುದು ಕೇಳಿದ ಹಾಗೆ ನಮ್ಮ ಪಾಠಕರಿಗೆ ತಿಳಿಸಿರುವೆನು.

ಇದಾದನಂತರದಲ್ಲಿ ನಾನು ಮುದುಕಿಯನ್ನು ಕರೆದು ಹೆಣವನ್ನು ಪರೀಕ್ಷಿಸುವ ಮನೆಗೆ ಕರೆದುಕೊಂಡು ಹೋದೆನು. ಆಕೆಯು ಎರಡು ಹೆಣಗಳನ್ನೂ ದೃಷ್ಟಿಸಿನೋಡಿದಳು. ನೋಡಿ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ನಾನು—ವಿಷಯವೇನೆಂದು ಕೇಳಿದುದಕ್ಕೆ, ಆಕೆಯು—ಈ ಹೆಂಗುಸು ನನ್ನ ಮಗಳಾದ ಸರಳಕುಮಾರಿಯು; ಈ ಗಂಡಸು ಆಕೆಯ ಸಂಸಾರ ಕಾರ್ಯನಿರ್ವಾಹಕನಾಗಿದ್ದ ಮಧುಸೂದನಶರ್ಮನು. ಈ ವಿಷಯದಲ್ಲಿ ಆವ ಸಂದೇಹವೂ ಇರುವುದಿಲ್ಲವೆಂದು ಹೇಳಿದಳು.

ವೃದ್ಧೆಯು ತನ್ನ ಮಗಳು ಸಂಸಾರಮಾಡಿಕೊಂಡಿರುತ್ತಿದ್ದಾಗ ಆಗಿಂದಾಗ ಅಲ್ಲಿಗೆ ಹೋಗಿ ಬರುತಿದ್ದಳಾದಕಾರಣ ಮಧುಸೂದನಶರ್ಮನನ್ನು ಆಗಿಂದಾಗ ನೋಡುತ್ತಿದ್ದಳು. ಆದಕಾರಣ ಮಧುಸೂದನನ ಮುಖವು ಆಕೆಗೆ ಹೊಸದೇನೂ ಆಗಿರಲಿಲ್ಲ. ಅವಳು ಸರಳಕುಮಾರಿಯ ಗುರುತನ್ನು ಕಂಡುಹಿಡಿದ ವಿಷಯ ಹೇಳಬೇಕಾದುದಿಲ್ಲ.

ಮುದುಕಿಯು ದೊರೆತುದು ನಮ್ಮ ಪುಣ್ಯೋದಯವೇ ಸರಿ. ಅವಳಿಂದಲೇ ಕೊಲೆಯಾದವರು ಆರೆಂಬುದು ಗೊತ್ತಾಯಿತು. ಸರಳಕುಮಾರಿಯೊಬ್ಬಳೇ ಕೊಲೆಯಾಗಿದ್ದಿದ್ದರೆ, ಆಕೆಯನ್ನು ಕೊಂದವರಾರೆಂಬುದರಲ್ಲಿ ಸಂಶಯವೇನೂ ಇರುತ್ತಿರಲಿಲ್ಲ. ಈಗಲಾದರೋ ಮಧುಸೂದನನೂ ಏಕಕಾಲದಲ್ಲಿಯೇ ಮೃತನಾಗಿರುವನು. ಆದುದರಿಂದಲೇ ನನಗೆ ದಿಕ್ಕೇ ತೋರದಂತಾಗಿರುವುದು.

ನಾನು ಈ ಮಾರ್ಗವನ್ನು ಬಿಟ್ಟು ಬೇರೊಂದುಪಾಯವನ್ನು ಹುಡುಕಿದೆನು. ನಾನು ಇಲ್ಲಿಯ ವರೆಗೂ ಸರಳೆಯ ಪೆಟ್ಟಿಗೆಯನ್ನು ಹುಡುಕಿನೋಡಬೇಕೆಂಬ ಆಲೋಚನೆಯನ್ನೇ ಮಾಡಿರಲಿಲ್ಲ. ಈಗ ಆ ಆಲೋಚನೆಯು ನನಗೆ ಹೊಳೆಯಿತು. ನಾನು ಅದೇ ರೀತಿಯಲ್ಲಿ ಮುದುಕಿಯ ಅಪ್ಪಣೆಯನ್ನು ತೆಗೆದುಕೊಂಡು ಪೆಟ್ಟಿಗೆಯನ್ನು ಹುಡುಕಿನೋಡಿದೆನು. ಅದರಿಂದಲೂ ಕೆಲವು ಸಂಗತಿಗಳು ತಿಳಿದುಬಂದುವು. ಆದರೂ ಅವುಗಳಿಂದ ಪ್ರಕೃತ ಕಾರ್ಯಕ್ಕೆ ಉಪಯೋಗವೇನೂ ಕಂಡು ಬರಲಿಲ್ಲ. ಆಕೆಯ ಪೆಟ್ಟಿಗೆಯಲ್ಲಿ ಕೆಲವು ಪತ್ರಗಳು ಸಿಕ್ಕಿದುವು. ಅವುಗಳಲ್ಲಿ ಕೆಲವು ಕೈಚೀಟಿಗಳು, ಕೆಲವು ಆಧಾರಪತ್ರಗಳು, ಕೆಲವು ಭೋಗ್ಯಪತ್ರಗಳು, ಕೆಲವು ರಸೀದಿಗಳು, ಕೆಲವು ಕೈಸಾಲದ ಪತ್ರಗಳು, ಕೆಲವು ಚೀಟಿಗಳು, ಇವಾದಿಯಾಗಿ ಎಲ್ಲವನ್ನೂ ಪರಿಶೀಲಿಸಿ ನೋಡಿದುದಾಯಿತು. ಅವುಗಳಿಂದ ತಿಳಿದುಬಂದುದು,—ಮಧುಸೂದನನು ವಿಶ್ವನಾಥನಿಗೆ ೧೦ ಲಕ್ಷ ರೂಪಾಯಿಗಳನ್ನು ಕೊಡಬೇಕೆಂದೂ, ಇತರರ ಕಡೆಯಿಂದ ಬರಬೇಕಾಗಿದ್ದುದು ಇಪ್ಪತ್ತೈದು ಲಕ್ಷ ರೂಪಾಯಿಗಳೆಂದೂ ಗೊತ್ತಾಯಿತು.

ನಾನು ಪತ್ರಗಳನ್ನು ಹುಡುಕುತ್ತಿರುವಾಗ ಮುದುಕಿ ನನ್ನನ್ನು ಕುರಿತು—ಮಹಾಶಯ, ಪತ್ರಗಳನ್ನು ಚೆನ್ನಾಗಿ ನೋಡೋಣವಾಗಲಿ. ಇವುಗಳ ವಿಷಯದಲ್ಲಿ ನನಗೇನೂ ಗೊತ್ತಾಗುವುದಿಲ್ಲ. ಸುಂಕನಹಳ್ಳಿಯ ವಾಸಸ್ಥನೊಬ್ಬನು ನಮ್ಮ ಮೇಲೆ ಕನಿಕರವಿಟ್ಟು ನಮ್ಮ ಪತ್ರಗಳನ್ನು ನೋಡಿ, ಕಾಗದಪತ್ರಗಳೆಲ್ಲವನ್ನೂ ಸರ್ಕಾರಕ್ಕೆ ಕೊಟ್ಟು ನ್ಯಾಯಸ್ಥಾನದಲ್ಲಿ ವ್ಯವಹರಿಸುವುದಾದರೆ ಹೋದ ಹಣವೆಲ್ಲವೂ ಹಿಂದಿರುಗಿ ಬರುವುದಾಗಿ ಹೇಳಿದ್ದನು.—ಎಂದು ಹೇಳಿ ಕಣ್ಣುಗಳಲ್ಲಿ ನೀರನ್ನು ತಂದುಕೊಂಡಳು.

ನಾನು ಆಕೆಯನ್ನು ಸಮಾಧಾನಪಡಿಸಿ—ತಾಯಿ, ಸುಂಕನಹಳ್ಳಿಯಲ್ಲಿರುವ ಮನುಷ್ಯನ ಹೆಸರೇನಮ್ಮ, ನಿಮಗೆ ಗೊತ್ತಿದ್ದರೆ ತಿಳಿಸಿ, ಎಂದು ಕೇಳಿದೆನು.

ಮುದುಕಿ—ಆತನ ಹೆಸರು ನನಗೆ ಗೊತ್ತಿಲ್ಲ. ಆದರೆ ಆತನ ಮನೆಯನ್ನು ನಾನು ಬಲ್ಲೆ. ನೋಡಿದರೆ ಆತನನ್ನು ಗುರುತಿಸಬಲ್ಲೆನು.

ನಾನು ಮುದುಕಿಯಿಂದ ತಿಳಿಯಬೇಕಾದ ಸಂಗತಿಗಳೆಲ್ಲವನ್ನೂ ವಿಶದವಾಗಿ ತಿಳಿದುಕೊಂಡು ಸುಂಕನಹಳ್ಳಿಗೆ ತೆರಳಿದೆನು. ಮುದುಕಿಯು ತಿಳಿಸಿದ್ದ ಮನೆಯ ಗುರುತನ್ನು ಕಂಡುಹಿಡಿದು, ಅಲ್ಲಿಗೆ ಹೋಗಿ ಅಲ್ಲಿದ್ದ ಒಬ್ಬ ಮನುಷ್ಯನನ್ನು ಕುರಿತು—ಸ್ವಾಮಿ, ಇಲ್ಲಿ ವಿಶ್ವನಾಥಶರ್ಮನ ಹೆಂಡಿತಿ ಮಕ್ಕಳು ವಾಸವಾಗಿರುವರಂತೆ, ಅವರೆಲ್ಲಿರುವರು ? ದಯೆಯಿಟ್ಟು ತಿಳಿಸಬೇಕು, ಎಂದು ಕೇಳಿದೆನು.

ನನ್ನ ಮಾತು ಕೇಳಿದಕೂಡಲೆ ಆ ಮನುಷ್ಯನ ಮುಖಭಾವವೇ ಮಾರ್ಪಟ್ಟು ಹೋಯಿತು, ಮುಖದ ವರ್ಣವೂ ಕಂಗೆಟ್ಟಿತು. ಆತನು ಚೇತರಿಸಿಕೊಂಡು— ಅದೇನು, ಮಹಾಶಯ, ಅವರ ವಿಷಯವನ್ನು ತಿಳಿಯುವುದರಿಂದ ತಮಗೇನು ಪ್ರಯೋಜನ? ಎಂದು ಕೇಳಿದನು.

ನಾನು ಹೇಳಿದೆನು—ವಿಶ್ವನಾಥಶರ್ಮನ ಹೆಂಡಿತಿ ಮಕ್ಕಳಿಂದ ನನಗೆ ತುಂಬ ಪ್ರಯೋಜನವಿದೆ. ನಾನು ಒಂದು ವರ್ಷದ ಹಿಂದೆ ವಿಶ್ವನಾಥನಿಂದ ಕೊಂಚ ಹಣವನ್ನು ಸಾಲ ತೆಗೆದುಕೊಂಡಿದ್ದೆನು. ವಾಯಿದೆಯಲ್ಲಿ ತೀರಿಸಲು ನನಗೆ ಅನುಕೂಲಿಸಲಿಲ್ಲ. ಈಗ ಹಣ ಸಿಕ್ಕಿದುದರಿಂದ ಸಾಲವನ್ನು ತೀರಿಸಲು ಆತನ ಮನೆಗೆ ಹೋಗಿ ನೋಡಿದೆನು. ಆತನು ಸತ್ತುಹೋದನೆಂದು ತಿಳಿದು ಬಂದಿತು. ಆತನ ಹೆಂಡಿತಿ ಸರಳಕುಮಾರಿಗಾದರೂ ಹಣವನ್ನು ಕೊಟ್ಟು ಋಣಮುಕ್ತನಾಗುವೆನೆಂದು ತಿಳಿದು ಆಕೆಯನ್ನು ಹುಡುಕಿಕೊಂಡು ತಿರುಗುತ್ತಿರುವೆನು. ತಮಗೆ ಗೊತ್ತಿದ್ದರೆ ದಯೆಯಿಟ್ಟು ತಿಳಿಸೋಣವಾಗಲಿ.

ನಾನು ಈ ರೀತಿಯಲ್ಲಿ ಹೇಳಿ ಆತನ ಮುಖಭಾವವನ್ನೇ ನೋಡುತ್ತಿದ್ದೆನು. ಸರಳಕುಮಾರಿಯ ಹೆಸರನ್ನು ಕೇಳಿದೊಡನೆಯೇ ಆತನು ಕೊಂಚ ಹೊತ್ತು ಬೆಚ್ಚಿದವನಾಗಿ ಮತ್ತೆ ಚೇತರಿಸಿಕೊಂಡು ಸುಮ್ಮನೆ ಕುಳಿತನು.

ಇದನ್ನು ನೋಡಿ—

ನಾನು—ಸ್ವಾಮಿ, ತಮ್ಮ ಹೆಸರು?

ಆತನು—ನನ್ನ ಹೆಸರು ನಾಗೇಂದ್ರ ಭೂಷಣ.

ನಾನು—ವಾಸಸ್ಥಾನ?

ಆತನು ನನ್ನ ಮಾತನ್ನು ಕೇಳಿ ಹೆದರಿದವನಾಗಿ,—ಸ್ವಾಮಿ, ನನ್ನ ಕುಲ ಗೋತ್ರಗಳಿಂದಾಗುವುದೇನು? ತಮಗೆ ಬೇಕಾದುದು ವಿಶ್ವನಾಥನ ಹೆಂಡಿತಿ ಮಕ್ಕಳ ವಿಷಯವಲ್ಲವೇ? ಎಂದನು.

ನಾನು—ಸ್ವಾಮಿ, ತಾವು ದೊಡ್ಡ ಮನುಷ್ಯರು. ತಮ್ಮ ಪರಿಚಯವು ನಮ್ಮಂಥವರಿಗೆ ಇರಬೇಕಾದುದು ಯುಕ್ತ. ತಮ್ಮ ಕುಲಗೋತ್ರಗಳಿಂದ ನನಗೆ ಪ್ರಯೋಜನವೇನೂ ಇಲ್ಲನೆಂಬುದು ನಿಜ, ಆದರೆ ತಿಳಿದರೆ ನಷ್ಟವಿಲ್ಲವಷ್ಟೇ?

ನಾಗೇಂದ್ರ—ನಷ್ಟವೆಂದರೇನು? ನೀವು ಈಗ ಬಂದಿರುವ ಕೆಲಸಕ್ಕೆ ಸಂಬಂಧಪಟ್ಟುದಲ್ಲವೆಂದು ನಾನು ಹೇಳಿದೆನು. ತಾವು ಅದನ್ನು ಮನಸ್ಸಿಗೆ ತೆಗೆದುಕೊಳ್ಳಬಾರದು. ನನ್ನ ವಾಸಸ್ಥಾನವು ಅಮರಾವತಿ.

ನಾನು—ತಮಗೆ ವಿಶ್ವನಾಥನ ಹೆಂಡಿತಿ ಮಕ್ಕಳ ವಿಷಯವೇನಾದರೂ ಗೊತ್ತಿದೆಯೇ ?

ನಾಗೇಂದ್ರ—ವಿಶೇಷ ಗೊತ್ತಿಲ್ಲವಾದರೂ ತಿಳಿದಷ್ಟು ಮಟ್ಟಿಗೆ ತಿಳಿಸುವೆನು. ಕೇಳಬೇಕು.

ನಾನು—ಹೇಳೋಣವಾಗಲಿ.

ನಾಗೇಂದ್ರ—ಈ ಸುಂಕನಹಳ್ಳಿಯಲ್ಲಿಯೇ ಮೊದಲು ನಾನು ಅವರನ್ನು ನೋಡಿದುದು. ನಾನು ಅವರ ದುರವಸ್ಥೆಯನ್ನು ನೋಡಿದ ಕೂಡಲೆ, ಅವರ ವಿಷಯದಲ್ಲಿ ನನಗೆ ದಯೆ ಹುಟ್ಟಿತು. ದೊಡ್ಡ ಮನುಷ್ಯರ ಮನೆ ಹೆಂಗುಸು ಭಿಕ್ಷೆ ಬೇಡಲಾರಳು, ಬೇಡದಿರಲಾರಳು. ಭಿಕ್ಷೆ ಬೇಡಿದರೆ ಅಪಮಾನ, ಬೇಡದಿದ್ದರೆ ಹೊಟ್ಟೆಗೆ ಮಾರ್ಗವಿಲ್ಲ. ಈ ಉಭಯ ಸಂಕಟಕ್ಕೊಳಗಾಗಿ ಇದ್ದ ದಿವಸ ತಿನ್ನುತ್ತಾ, ಇಲ್ಲದ ದಿವಸ ಉಪವಾಸವಿರುತ್ತಾ ಕೆಲವು ದಿನಗಳನ್ನು ಬಹಳ ಪ್ರಯಾಸದಿಂದ ಕಳೆಯಲಾರಂಭಿಸಿದರು. ಇದನ್ನು ನೋಡಿ ನನ್ನ ಹೊಟ್ಟೆ ತಡೆಯಲಾರದೆ, ನಾನು ಆಗಿಂದಾಗ ಅವರಿಗೆ ಸಾಹಾಯ್ಯ ಮಾಡುತ್ತಿದ್ದೆನು.

ನಾನು—ದುಃಖಿಗಳ ದುಃಖವನ್ನು ನೋಡಿ ಆರ ಪ್ರಾಣವು ತುಟುಗುಟ್ಟುವುದೋ, ಅಂಥವನ ಅಂತಃಕರಣವು ಅಮೂಲ್ಯವಾದುದು. ಗತಿಯಿಲ್ಲದ ನಿರ್ಭಾಗ್ಯರಾದ ದೊಡ್ಡ ಮನುಷ್ಯರ ವಿಧವೆಯರಿಬ್ಬರಿಗೆ ಸಾಹಾಯ್ಯ ಮಾಡುವುದರ ಮೂಲಕ ತಾವು ತಮ್ಮ ದೊಡ್ಡತನವನ್ನು ಲೋಕಕ್ಕೆ ಬೀರಿದಿರೆಂಬುದಾವುದುಂಟೋ ಅದನ್ನು ಕೊಂಡಾಡಲು ನನ್ನ ಭಾಷಾಪ್ರಪಂಚದಲ್ಲಿ ಸರಿಯಾದ ಮಾತುಗಳೇ ದೊರೆಯಲಾರವು.

ನಾಗೇಂದ್ರ—ಕಷ್ಟಕಾಲದಲ್ಲಿ ನನ್ನಿಂದ ಸಾಹಾಯ್ಯಹೊಂದಿದ ಆ ಹೆಂಗುಸರು ನನ್ನ ವಿಷಯದಲ್ಲಿ ಬಹಳ ಕೃತಜ್ಞರಾಗಿದ್ದರು. ನಾನು ಈ ಸುಯೋಗವನ್ನು ಅವಲಂಬನೆ ಮಾಡಿಕೊಂಡು ಪ್ರತಿನಿತ್ಯವೂ ಅವರ ಮನೆಗೆ ಹೋಗುತ್ತಲೂ, ಅವರ ಯೋಗಕ್ಷೇಮವನ್ನು ವಿಚಾರಿಸುತ್ತಲೂ, ಅವರಿಗೆ ನಾನು ಕೊಂಚ ಮಟ್ಟಿಗೆ ಸಹಾಯನಾಗಿದ್ದೆನು. ನಾನು ಸಾಹಾಯ್ಯ ಮಾಡುವುದಲ್ಲದೆ ನನ್ನ ಸ್ನೇಹಿತರಿಗೂ ಇದ್ದ ಸಂಗತಿಯನ್ನು ತಿಳಿಸಿ ಅವರಿಂದಲೂ ಆಗಿಂದಾಗ ಉಪಕಾರ ಮಾಡಿಸುತ್ತಿದ್ದೆನು.

ನಾನು—ಸರಳಕುಮಾರಿಯು ತಮ್ಮೊಡನೆ ಮಾತನಾಡುತ್ತಿದ್ದಳೋ ?

ನಾಗೇಂದ್ರ—ಮೊದಲು ಮೊದಲು ನಾಚುಗೆಯಿಂದ ಮಾತನಾಡುತ್ತಿರಲಿಲ್ಲ. ಒಂದು ದಿನ ಆಕೆಯ ತಾಯಿಗೆ ಜ್ವರಬಂದಿತು. ಆಗ ನಾನು ವೃದ್ಧೆಯ

ಶಿಶ್ರೂಷೆಯನ್ನು ಮಾಡಿ ಗುಣಮಾಡಿದೆನು. ಅಂದು ಮೊದಲು ಸರಳೆಯು ನನ್ನ ವಿಷಯದಲ್ಲಿ ಬಹಳ ಕೃತಜ್ಞೆಯಾಗಿದ್ದಳು. ಆ ಮೇಲೆ ನನ್ನೊಡನೆ ಮಾತನಾಡುವುದಕ್ಕೂ ಪ್ರಾರಂಭ ಮಾಡಿದಳು. ಅವರಿಗೇನು ಆಗಬೇಕಾಗಿದ್ದರೂ, ನನ್ನ ಸಲಹೆಯನ್ನು ತೆಗೆದುಕೊಳ್ಳದೇ ಎಂದಿಗೂ ಮಾಡುತ್ತಿರಲಿಲ್ಲ.

ನಾನು—ಸರಳೆಯ ಚರಿತ್ರೆಯ ವಿಷಯದಲ್ಲಿ ತಮ್ಮ ಅಭಿಪ್ರಾಯವೇನು? ತಾವು ಕಂಡಾಗಿನಿಂದೀಚೆಗೆ ಆಕೆಯ ವಿಷಯದಲ್ಲಿ ತಮ್ಮ ಅಭಿಪ್ರಾಯವೇನೆಂದು ನನ್ನ ಪ್ರಶ್ನೆ.

ನಾಗೇಂದ್ರ—ನಾನು ನೋಡಿದುದರಲ್ಲಿ ಆಕೆಯ ಚರಿತ್ರೆಯು ಅತಿ ನಿರ್ಮಲವಾದುದು. ಆದರೆ—

ನಾನು—ಆದರೆ ಏನು?

ನಾಗೇಂದ್ರ—ಈಗ ಆ ಮಾತು ಕಟ್ಟಿಕೊಂಡು ಪ್ರಯೋಜನವೇನು? ಅದು ಹೋಗಲಿ; ಬೇರೇ ಮಾತನಾಡೋಣ.

ನಾನು—ತಾವು ಹಾಗೆ ಬೇಸರಪಡಕೂಡದು. ಆಕೆಯ ವಿಷಯವನ್ನು ಕೇಳುವುದರಲ್ಲಿ ನನಗೆ ಪರಮ ವಿಶ್ವಾಸ. ದಯೆಯಿಟ್ಟು ತಾವು ಆವುದನ್ನೂ ಮರೆಮಾಚಬಾರದು.

ನಾಗೇಂದ್ರ—ಸರಳೆಯು ಇತರರಿಗೆ ಹೇಗೋ ಅದು ನನಗೆ ಗೊತ್ತಿಲ್ಲ. ನನಗಾದರೋ ಅವಳನ್ನು ನೋಡಿದ ಮೊದಲ್ಗೊಂಡು ಆಕೆಯನ್ನು ಮೇಲೆ ಮೇಲೆ ನೋಡುತ್ತಿರಬೇಕೆಂಬ ಆಸೆಯು ಬಲವತ್ತರವಾಗಿದ್ದಿತು. ಆಕೆಯನ್ನು ನೋಡಿದ ದಿನ ನನಗೇನೋ ಸಂತೋಷವಾಗುವುದು; ನೋಡದ ದಿನ ಸಂಕಟವಾಗುವುದು. ಆಕೆಯೊಡನೆ ಮಾತನಾಡಿದ ದಿನವೇ ಸುದಿನ, ಅಂದೇ ನನಗೆ ಸ್ವರ್ಗಲಾಭ. ಬಹು ಮಾತಿನಿಂದೇನು? ನಾನು ಸರಳಕುಮಾರಿಯ ರೂಪಗುಣ ಮುಂತಾದವುಗಳಲ್ಲಿ ಮುಗ್ಧನಾಗಿ ಆಕೆಯನ್ನು ಬಹಳವಾಗಿ ಮೋಹಿಸಲಾರಂಭಿಸಿದೆನು.

ನಾಗೇಂದ್ರಭೂಷಣನ ಮಾತು ಕೇಳಿದೊಡನೆ ಆತನು ಕೇವಲ ಕಳವಳಗೊಂಡಿರುವನೆಂದು ನನಗೆ ಬೋಧೆಯಾಯಿತು. ಆದುದರಿಂದಲೇ ಪೂರ್ವಾಪರ ವಿವೇಚನೆಯಿಲ್ಲದೆ ಎಲ್ಲವನ್ನೂ ನನ್ನ ಮುಂದೆ ಹೇಳತೊಡಗಿದನು. ಲೋಕದಲ್ಲಿ ಆರಾದರೂ ಅಪರಿಚಿತರ ಮುಂದೆ ತಮ್ಮ ಆಂತರ್ಯವನ್ನು ಬಾಯಿ ಬಿಟ್ಟು ಹೇಳುವರೇ? ಇದು ಹೇಗಾದರೂ ಹೋಗಲಿ. ಇದರ ವಿಷಯದಲ್ಲಿ ನಾನು ಆತನನ್ನು ಪೀಡಿಸದೇ ಬೇರೆ ವಿಧವಾದ ಮಾತುಗಳನ್ನಾಡಲುಪಕ್ರಮಿಸಿದೆನು.

ನಾನು—ಸರಳೆಯು ಒಬ್ಬ ದೊಡ್ಡ ಸಾಹುಕಾರನ ಹೆಂಡಿತಿ ಯೆಂಬುದು ನಿಮಗೆ ಗೊತ್ತೋ ?

ನಾಗೇಂದ್ರ—ಗೊತ್ತು, ಆಕೆಯ ಹತ್ತಿರ ಅನೇಕ ಪತ್ರಗಳಿರುವವು. ಅವುಗಳನ್ನು ನೋಡಿದರೆ ಆಕೆಗೆ ಬೇಕಾದ ಹಾಗೆ ಹಣಕಾಸುಗಳು ಬರಬೇಕಾಗಿವೆ. ಆ ಮಾರ್ಗದಲ್ಲಿ ನಾನು ಯತ್ನಮಾಡಿ ನೋಡಿದೆನು. ಅದು ನನ್ನಿಂದ ಸಾಧ್ಯ ವಾಗಲಿಲ್ಲ.

ನಾನು—ಸರಳೆಯು ಎಲ್ಲಿರುವಳೆಂಬುದನ್ನು ಬಲ್ಲಿರಾ ?

ನಾಗೇಂದ್ರ—ಬಲ್ಲೆ.

ನಾನು—ಎಲ್ಲಿರುವಳು ?

ನಾಗೇಂದ್ರ—ಯಮುಲೋಕದಲ್ಲಿ.

ನಾನು—ಏನ ಹೇಳಿದಿರಿ ? ಯಮುಲೋಕದಲ್ಲಿ ? ಅದು ತಮಗೆ ಹೇಗೆ ಗೊತ್ತು ?

ನಾಗೇಂದ್ರ—ವೃತ್ತಾಂತ ಪತ್ರಿಕೆಗಳಲ್ಲಿ ಬರೆದಿರುವರು. ಅದಕ್ಕಿಂತಲೂ ಮತ್ತೇನು ಆಧಾರಬೇಕು ?

ನಾನು—ನಾನೂ ಪತ್ರಿಕೆಗಳನ್ನು ಓದಿರುವೆನು. ಅದರಲ್ಲಿ ಸರಳಕುಮಾ ರಿಯ ಹೆಸರಿದ್ದಂತಿಲ್ಲ.

ನಾಗೇಂದ್ರ—ಹೆಸರಿಲ್ಲದಿದ್ದರೇನು ? ಸಂದರ್ಭಗಳಿಂದ ಅವಳೇ ಎಂದು ತಿಳಿದುಬಂದಿತು.

ನಾನು—ನಿಮ್ಮ ಊಹೆಗೆ ಕಾರಣವೇನು ?

ನಾಗೇಂದ್ರ—ಅನೇಕ ಕಾರಣಗಳಿವೆ. ಆ ಭಾಗ್ಯಹೀನೆಯಾದ ಅನಾ ಥೆಯ ವಿಷಯದಲ್ಲಿ ತಾವು ಇಷ್ಟೊಂದು ವಿಚಾರಿಸುವುದು ನೋಡಿದರೆ ನನಗೆ ಆಶ್ಚರ್ಯವಾಗುವುದಲ್ಲದೇ, ಏನೋ ಸಂಶಯವೂ ತೋರುವುದು. ತಮ್ಮ ಉದ್ದೇಶ ವನ್ನು ತಾವು ಬಹಿರಂಗಪಡಿಸಿದಲ್ಲದೇ ನಾನು ಆಕೆಯ ಸಂಬಂಧವಾಗಿ ಆವ ಮಾತನ್ನೂ ಆಡುವುದಿಲ್ಲ. ತಾವು ಹಣ ತೀರಿಸುವುದಕ್ಕೆ ಬಂದವರು ಆ ಮಾತನ್ನೇ ಮರೆತುಬಿಟ್ಟರಿ. ತಾವು ಪ್ರಶ್ನೆಹಾಕುವುದನ್ನು ನೋಡಿದರೆ, ನನಗೇನೇನೋ ತೋರುವುದು ; ಒಳಗೆ ಭಯವೂ ಆಗುವುದು.

ನಾಗೇಂದ್ರನಿಗೆ ನನ್ನ ವಿಷಯದಲ್ಲಿ ಸಂದೇಹವೇರ್ಪಟ್ಟು ಹೋಯಿತು. ಅದನ್ನು ಹೋಗಲಾಡಿಸುವುದು ಅಸಾಧ್ಯ. ಅದನ್ನು ಹೋಗಲಾಡಿಸುವ ಪ್ರಯತ್ನ ತಾನೇ ನನಗೇಕೆ? ನನಗೆ ಬಂದ ಕೆಲಸವಾಗುವುದು ಮುಖ್ಯ. ನಾನಿನ್ನು ಮರೆ ಮಾಚಿಕೊಂಡಿರುವುದು ಸರಿಯಲ್ಲವೆಂದು ತಿಳಿದು ಆತನನ್ನು ಕುರಿತು, ಮಹಾಶಯ! ತಮ್ಮ ಮುಂದೆ ಸುಳ್ಳೇಕೆ? ನಾನೊಬ್ಬ ಪತ್ತೇದಾರನು. ನಾನು ಆಕೆಗೆ ಸಾಲ ಕೊಡಬೇಕೆಂದು ತಮ್ಮ ಮುಂದೆ ಹೇಳಿದ ಮಾತು ಸುಳ್ಳು. ನಾನು ಆ ಕೊಲೆಯ ಅನುಸಂಧಾನಕ್ಕಾಗಿಯೇ ತಮ್ಮಲ್ಲಿ ಬಂದಿರುವೆನು. ಆಕೆಯನ್ನು ಕೊಲೆ ಮಾಡಿದಾತನನ್ನು ಕಂಡು ಹಿಡಿಯಬೇಕಾದುದೇ ನನ್ನ ಪ್ರಕೃತ ಕರ್ತವ್ಯವು. ಈ ವಿಷಯದಲ್ಲಿ ತಾವು ನನಗೆ ಸಾಹಾಯ್ಯಮಾಡುವುದಾದರೆ ತಮಗೆ ಈ ಲೋಕದಲ್ಲಿ ಕೀರ್ತಿಯುಂಟು; ಪರಲೋಕದಲ್ಲಿ ಪುಣ್ಯವುಂಟು, ಎಂದು ಹೇಳಿದೆನು.

ನಾಗೇಂದ್ರನು ಪತ್ತೇದಾರನೆಂಬ ಮಾತನ್ನು ಕೇಳಿದ ಕೂಡಲೆ ಶೂಲದಿಂದ ಇರಿಸಿಕೊಂಡವನಂತೆ ವಿಲವಿಲನೆ ಒದೆದಾಡಿದನು. ಆತನ ಬಾಯಿ ಒಣಗಿ ಹೋಗಿ ಮಾತೇ ನಿಂತುಹೋಯಿತು. ನಾನು ಆತನನ್ನು ಎಷ್ಟೋ ಸಂತೈಸಿದ ಮೇಲೆ, ಆತನು ಸಮಾಧಾನಕ್ಕೆ ಬಂದು, 'ಸ್ವಾಮಿ, ನನ್ನ ತಪ್ಪೇನಿದ್ದರೂ ಕ್ಷಮಿಸಬೇಕು. ನಾನೇನೂ ಕಂಡವನಲ್ಲ. ನನಗೆ ಗೊತ್ತಿರುವುದೆಲ್ಲವನ್ನೂ ಒಂದೂ ಬಿಡದೆ ತಮಗೆ ತಿಳಿಸಿ ಬಿಡುವೆನು. ತಾವು ಮಾತ್ರ ನನ್ನಲ್ಲಿ ಕನಿಕರವಿಟ್ಟು ನನ್ನನ್ನು ತೊಂದರೆಗೆ ಸಿಲುಕಿಸಕೂಡದು. ಈ ಪ್ರಾರ್ಥನೆಯನ್ನು ತಾವು ನೆರವೇರಿಸಿ ಕೊಡಬೇಕು, ಎಂದು ನನ್ನ ಕಾಲುಗಳ ಮೇಲೆಬಿದ್ದು ಒದೆದಾಡಿದನು.

---

## ಎಂಟನೆಯ ಅಧ್ಯಾಯ

ನಾಗೇಂದ್ರ ಭೂಷಣನು ನನ್ನ ಕಾಲುಗಳ ಮೇಲೆ ಬಿದ್ದು ಪ್ರಾರ್ಥನೆ ಮಾಡಿಕೊಳ್ಳುತ್ತಿರುವನು. ನಾನು ಆತನ ಪ್ರಾರ್ಥನೆಯನ್ನು ನೆರವೇರಿಸಬೇಕೋ, ನೆರವೇರಿಸಬಾರದೋ ನನಗಾವುದೂ ಗೊತ್ತಾಗದೇ ಜೇಡರ ಬಲೆಯಲ್ಲಿ ಬಿದ್ದ ನೊಣದಂತೆ ತಲ್ಲಣಿಸಿಹೋದೆನು. ನಾನು ಕೊಂಚ ಹೊತ್ತು ನಾನಾಪ್ರಕಾರವಾಗಿ ಆಲೋಚಿಸಿ ದಿಕ್ಕು ತೋರದವನಾಗಿ ಆತನನ್ನು ಕುರಿತು,—ಅಯ್ಯ, ತಾವು ತಪ್ಪೇನೂ ಮಾಡಿಲ್ಲವೆಂದು ತೋರುವುದು. ಆದರಿಂದ ತಮಗೆ ತೊಂದರೆಯುಂಟಾಗಲಾರದೆಂದು ನನಗೆ ನಂಬುಗೆಯಿದೆ. ಒಂದು ವೇಳೆ ತಾವೇ ಆಕೆಯನ್ನು ಕೊಲೆ ಮಾಡಿರುವ ಪಕ್ಷದಲ್ಲಿ ನನ್ನ ಯತ್ನವೇನಿರುವುದು? ಎಂದು ಹೇಳಿದೆನು.

ನಾನು ಹೇಳಿದ ಮಾತನ್ನು ಕೇಳಿದ ಕೂಡಲೆ, ಆತನ ಮುಖದಲ್ಲಿ ಕೆಂಪೇರಿತು, ಕೋಪದಿಂದ ಆತನ ಸರ್ವಾಂಗವೂ ಥರಥರನೆ ನಡುಗಿತು. ಹಾಗಿದ್ದರೂ

ಆತನು ಸಾಧ್ಯವಾದಷ್ಟು ಮಟ್ಟಿಗೆ ತನ್ನ ಕೋಪವನ್ನು ತನ್ನಲ್ಲಿಯೇ ಅಡಗಿಸಿಕೊಂಡು—ತಾವು ಏನ ಹೇಳೋಣವಾಯಿತು? ನಾನೇ ಆಕೆಯನ್ನು ಕೊಲೆ ಮಾಡಿದವನು? ಚೆನ್ನಾಗಿದೆ! ಚೆನ್ನಾಗಿದೆ! ಆಕೆಯನ್ನು ಕೊಲೆ ಮಾಡುವ ಉದ್ದೇಶವು ನನಗೆ ಇದ್ದಿದ್ದರೆ, ನಾನು ಆಕೆಯ ವಿಷಯದಲ್ಲಿ ಉನ್ಮತ್ತನಾಗಿರುತ್ತಿದ್ದೆನೇ? ಆಕೆಯನ್ನು ಮದುವೆಯಾಗುವುದಕ್ಕೋಸ್ಕರ ಆಕೆಯ ಕಾಲುಗಳನ್ನು ಹಿಡಿದುಕೊಂಡು ಬೇಡಿಕೊಳ್ಳುತ್ತಿದ್ದೆನೇ? ಅನೇಕ ವರ್ಷ ಪತ್ತೇದಾರರಾದುದಕ್ಕೆ ಇದೀಗ ಫಲವೆಂದು ಹೇಳಬಹುದು. ಈ ಭೂದೇವಿಯ ಸತ್ಯವಾಗಿಯೂ ಆಕೆಯನ್ನು ಕೊಲೆ ಮಾಡುವುದಕ್ಕೆ ನನ್ನ ಕೈಯೆಂದಿಗೂ ಬರುವುದಿಲ್ಲ; ನಾನೆಂದಿಗೂ ಆಕೆಯನ್ನು ಕೊಲೆ ಮಾಡಿದವನಲ್ಲ, ಎಂದು ಮೊದಲು ತೊದಲಾಗಿ ಮಾತನಾಡಿದನು.

ನಾನು—ಮಹಾಶಯ, ತಾವು ಕೋಪಮಾಡಬೇಡಿ. ನಾನು ತಮ್ಮ ಅಭಿಪ್ರಾಯವನ್ನು ತಿಳಿಯಲೋಸುಗ ಈ ರೀತಿಯಲ್ಲಿ ಮಾತನಾಡಿದೆನು. ತಾವು ಆಕೆಯನ್ನು ಎಷ್ಟರ ಮಟ್ಟಿಗೆ ಪ್ರೀತಿಸುವಿರೆಂಬುದನ್ನು ತಿಳಿಯಲೋಸುಗ ಈರೀತಿಯಲ್ಲಿ ಮಾತನಾಡಿದೆನು. ತಾವು ಉಳಿದರತಕ್ಕ ಸಂಗತಿ ಎಲ್ಲವನ್ನೂ ವಿಶದವಾಗಿ ತಿಳಿಸೋಣವಾಗಲಿ. ಅದರಿಂದ ತಮಗೆ ಒಳ್ಳೆಯದೇ ಆಗುವುದು. ಸರಳಕುಮಾರಿಯನ್ನು ತಾವು ಕೊಂದವರಲ್ಲವೆಂದು ಸಾಧನೆ ಮಾಡುವ ಭಾರವು ತಮ್ಮ ತಲೆಯ ಮೇಲಿರುವುದು. ಇದನ್ನು ಮಾತ್ರ ತಾವು ಜ್ಞಾಪಕದಲ್ಲಿಟ್ಟಿರಬೇಕು.

ನಾಗೇಂದ್ರ—ಸ್ವಾಮಿ, ನಾನೇನೂ ಮಾಡಿದವನಲ್ಲ, ನನಗಾವುದೂ ಗೊತ್ತಿಲ್ಲ. ಆಕೆಯು ಸತ್ತುಹೋದಳೆಂಬ ಸುದ್ದಿಯನ್ನು ನಾನು ಕೇಳಿದಾಗಿನಿಂದಲೂ ನಾನು ನನ್ನವನಾಗಿಲ್ಲ. ನನ್ನ ಪ್ರಾಣವು ಗುರುಗುರುಗುಟ್ಟುವುದು, ನನ್ನ ಶರೀರವು ನನಗೆ ಭಾರವಾಗಿರುವುದು. ಊಟದಲ್ಲಿ ನನಗೆ ಆಶೆಯಿಲ್ಲ, ರಾತ್ರಿಯಲ್ಲಿ ನನಗೆ ನಿದ್ರೆಯೆಂಬುದೇ ಇಲ್ಲ. ಹಾ ದೈವವೆ! ಆಕೆಯೊಡನೆ ನನ್ನನ್ನೂ ಕೊಲೆ ಮಾಡಿದ್ದರೆ ಧನ್ಯನಾಗಿರುತ್ತಿದ್ದೆನಲ್ಲ!

ನಾಗೇಂದ್ರನು ಹೀಗೆ ಹೇಳುತ ಹೇಳುತ ಮಕ್ಕಳಂತೆ ಗೊಳೋ ಎಂದು ಅಳತೊಡಗಿದನು.

ನಾನು ನಾಗೇಂದ್ರನನ್ನು ಬಹಳ ಹೊತ್ತು ಪರೀಕ್ಷಿಸಿ ನೋಡಿದೆನು. ಮೊದಲು ಮೊದಲು ಆತನ ಮೇಲಿದ್ದ ಸಂಶಯವು ಕ್ರಮಕ್ರಮವಾಗಿ ಮಾಯವಾಗುತ ಬಂದಿತು. ಆತನು ಕೊಂಚ ಹೊತ್ತು ಅಳುತ್ತಿದ್ದು—ಮಹಾಶಯ, ನನ್ನಿಂದ ಏನು ಸಾಹಾಯ್ಯವಾಗಬೇಕಾದರೂ ಮಾಡಲು ಸಿದ್ಧನಾಗಿರುವೆನು. ತಾವು ಆವ ಪ್ರಶ್ನೆ

ಆತನು ಬಿಂಕದಿಂದ ನನ್ನ ಮೇಲೆ ಅಡಿಗಡಿಗೆ ನಾಯಿಯಂತೆ ಬಿದ್ದು ಮನಸ್ಸು ಬಂದಂತೆ ಬೊಗಳುತ್ತಿದ್ದನು. ನನಗೆ ಅದು ಸಹಿಸಲಿಲ್ಲ. ನಾನು ಆ ಕೂಡಲೆ ಅವನ ಕೆಲಸವನ್ನು ಅವನಿಗೇ ಒಪ್ಪಿಸಿ ಹೊರಟು ಬಂದೆನು. ಈ ಸಂದರ್ಭದಲ್ಲಿ ಆತನಿಗೂ ನನಗೂ ಮಾರಾ ಮಾರಿ ಯುದ್ಧ ನಡೆಯಲಿಲ್ಲವಾಗಿ, ನನ್ನ ಗುರುಬಲವು ಚೆನ್ನಾಗಿದ್ದಿತೆಂದೇ ಹೇಳಬೇಕು.

ಅದಕ್ಕೆ ಸರಳೆಯು—ನೀವು ಮಾಡಿದ ಕೆಲಸ ಚೆನ್ನಾಗಿ ಕಾಣುವುದಿಲ್ಲ. ನಿಮ್ಮನ್ನು ಎಷ್ಟು ಪ್ರಾಣಿಗಳು ಆಶ್ರಯಿಸಿಕೊಂಡಿವೆಯೆಂಬುದನ್ನು ನೋಡಿ ಯಲ್ಲವೇ ನೀವು ಕೆಲಸ ಮಾಡಬೇಕು. ನೀವೇನೋ ಸಾಹುಕಾರನನ್ನು ಬಿಟ್ಟಿರಿ, ಆಶ್ರಯಿಸಿಕೊಂಡಿರುವವರು ನಿಮ್ಮನ್ನು ಬಿಡುವುದಕ್ಕಾದೀತೆ? ಹಿಂದೆ ಮುಂದೆ ನೋಡದೆ ನೀವು ಕೆಲಸಮಾಡಿದುದಕ್ಕಾಗಿ ನಾನು ಬಹಳವಾಗಿ ವಿಷಾದಿಸುವೆನು, ಎಂದು ಹೇಳುತ್ತಿರುವಷ್ಟರಲ್ಲಿಯೇ ನಾನು ಆ ಮಾತನ್ನು ಮರೆಯಿಸುವುದಕ್ಕಾಗಿ, —ಸರಳೆ, ನೀನೇಕೆ ಬಹಳವಾಗಿ ಕಂಗೆಟ್ಟು ಹೋಗಿರುವೆಯೆಂದು ಕೇಳಿದೆನು. ಅದನ್ನು ಕೇಳಿ ಸರಳೆಯು—ನಿಮಗೆ ಗೊತ್ತಿಲ್ಲದುದು ಏನಿರುವುದು ? ಈ ದಿನವೆಲ್ಲ ನಮ್ಮಿಬ್ಬರಿಗೂ ಊಟವಿಲ್ಲ, ಎಂದಳು.

ಸರಳೆಯಾಡಿದ ಮಾತನ್ನು ಕೇಳಿ, ನನಗುಂಟಾದ ಸಂಕಟವನ್ನು ತಿಳಿಸಲು ನನಗೆ ಬಾಯೇ ಬಾರದು. ಆ ಸಮಯದಲ್ಲಿ ನನ್ನಲ್ಲಿ ಏನಿದ್ದಿದ್ದರೂ ಕೊಟ್ಟು ಬಿಡುತ್ತಿದ್ದೆನು. ನಿರ್ಭಾಗ್ಯನಾದ ನನ್ನಲ್ಲಿ ವಿಷ ತೆಗೆದುಕೊಳ್ಳುವುದಕ್ಕೂ ಒಂದು ಕಾಸೂ ಇರಲಿಲ್ಲ. ಸಾಲಮಾಡಿಯಾದರೂ ತಂದು ಕೊಡೋಣವೆಂದರೆ, ನನ್ನನ್ನು ನೋಡಿ ಸಾಲಕೊಡುವವರಾರೂ ಇರಲಿಲ್ಲ. ಎಂದಿಗೂ ತನ್ನ ಸಂಕಟವನ್ನು ಹೇಳಿ ಕೊಳ್ಳದಿದ್ದ ಸರಳೆಯು ಇಂದು ಬಾಯಿಬಿಟ್ಟು ಹೇಳಿದಳು. ಈ ಸಮಯಕ್ಕೆ ಸರಿ ಯಾಗಿ ನನ್ನ ಕೈಯಲ್ಲಿ ಏನೂ ಇಲ್ಲದಿರಬೇಕೇ !

ಈ ರೀತಿಯಲ್ಲಿ ತನ್ನ ಪೂರ್ವ ವೃತ್ತಾಂತವನ್ನು ಮನಕರಗುವಂತೆ ವರ್ಣಿ ಸುತ್ತಿರುವ ನಾಗೇಂದ್ರ ಭೂಷಣನನ್ನು ನಾನು ತಡೆದು,—ಮಹಾಶಯ, ನಿಮ್ಮ ಸಂಕಟವನ್ನು ಕೇಳಿದರೆ, ಕಲ್ಲಾದರೂ ಕರಗಿ ಕರಗಿ ನೀರಾಗಿ ಹೋಗುವುದು. ನನಗಾದರೂ ವ್ಯಸನವು ಮೇಲೆ ಮೇಲೆ ಉಕ್ಕಿ ಬರುತ್ತಿರುವುದು. ತಮ್ಮ ಕಥೆ ಯನ್ನು ಕೊಂಚ ಮಟ್ಟಿಗೆ ನಿಲ್ಲಿಸೋಣವಾಗಲಿ. ಪ್ರಕೃತ ತಾವು ದೇವರ ದರ್ಶ ನಕ್ಕಾಗಿ ಹೋಗುತ್ತಿರುವಾಗ ದಾರಿಯಲ್ಲಿ ಸರಳೆಯನ್ನು ನೋಡೋಣವಾಯಿತಷ್ಟೆ, ಆಗ ಆಕೆಯು ಎಲ್ಲಿಗೆ ಹೋಗುತ್ತಿದ್ದಳು ? ಎಂದು ಕೇಳಿದೆನು.

ನಾಗೇಂದ್ರ—ಈಕೆಯು ರಾಮನಗರಕ್ಕಾದರೂ ಹೋಗಿ ಹೊಟ್ಟೆ ಹೊರೆದುಕೊಳ್ಳಬೇಕೆಂದು ಆಗಿಂದಾಗ ಹೇಳುತ್ತಿದ್ದಳು. ಪ್ರಾಯಿಕವಾಗಿ ಅಲ್ಲಿಗೇನಾದರೂ ಹೋಗುವುದರಲ್ಲಿದ್ದಳೋ ಏನೋ ನನಗೆ ಗೊತ್ತಿಲ್ಲ.

ನಾನು—ಅಲ್ಲಿಗೆ ಹೋಗಲು ಅವಳಿಗೆ ಉದ್ದೇಶವೇನಿದ್ದಿರಬಹುದು?

ನಾಗೇಂದ್ರ—ಉದ್ದೇಶವಿದೆ. ಅವಳ ಹತ್ತಿರ ಅನೇಕ ಪತ್ರಗಳು ಇದ್ದುವು. ನಾನು ಅವುಗಳನ್ನು ನೋಡಿ—ಸರಳೆ, ನಿನ್ನ ಯಜಮಾನರಿಗೆ ಬಹಳ ಹಣವು ಬರಬೇಕಾದುದಿದೆ. ನನ್ನ ಹತ್ತಿರ ಹಣವಿದ್ದರೆ ವ್ಯವಹಾರ ಮಾಡಿ ಹಣವೆಲ್ಲವನ್ನೂ ಬರಮಾಡಿ ಕೊಡುತ್ತಿದ್ದೆನು. ಈಗ ಆರಲ್ಲಿಯೂ ಒಂದು ಕಾಸೂ ಇಲ್ಲ. ರಾಮನಗರಕ್ಕಾದರೂ ಹೋದರೆ ಅಲ್ಲಿ ದಯಾಳುಗಳಾದ ಅನೇಕ ವಕೀಲರಿರುವರು. ಆರಾದರೂ ಈ ಕೆಲಸವನ್ನು ಕೈಗೊಂಡು ನಿನಗೆ ಸಾಹಾಯ್ಯಮಾಡಿದರೂ ಮಾಡಬಹುದು. ನಿನ್ನ ಸ್ಥಿತಿಯನ್ನು ನೋಡಿದರೆ ಕಟುಕನೂ ಧಿಕ್ಕರಿಸಲಾರನು, ಎಂದು ಹೇಳಿದೆನು. ಅದಕ್ಕೆ ಆಕೆಯು ಹೇಳಿದುದು—ನಾನು ಹೆಣ್ಣು ಹೆಂಗುಸು, ಪತ್ರಗಳೆಲ್ಲವನ್ನೂ ನಿಮ್ಮ ಕೈಯಲ್ಲಿ ಕೊಡುವೆನು, ನೀವೇ ಹೇಗಾದರೂ ಮಾಡಿ ನನಗೆ ಅನುಕೂಲಪಡಿಸಿ ಕೊಡಿ. ಅನಂತರ ಅನ್ನದ ಬಾಧೆ ತಪ್ಪಿಹೋಗುವುದು. ಹಾಗಾಗುವುದಾದರೆ ತಮ್ಮನ್ನು ನಾನು ದೇವರಂತೆ ಕಂಡುಕೊಳ್ಳುವೆನು.

ನಾನು—ಆಕೆಯ ಹಣದ ಉದ್ಧಾರದ ವಿಷಯದಲ್ಲಿ ತಾವು ಎಷ್ಟರ ಮಟ್ಟಿಗೆ ಯತ್ನಮಾಡೋಣವಾಯಿತು?

ನಾಗೇಂದ್ರ—ನಾನು ಎಷ್ಟೋ ಪ್ರಯತ್ನಮಾಡಿನೋಡಿದೆನು. ಆವುದರಿಂದಲೂ ಆವ ಫಲವೂ ಆಗಲಿಲ್ಲ.

ನಾನು—ಅದನ್ನು ನೋಡಿ ಆಕೆಯು ತಮ್ಮ ಮುಂದೆ ಏನ ಹೇಳಿದಳು?

ನಾಗೇಂದ್ರ—ಆಕೆಯು ಹೇಳಿದುದು—'ನಮ್ಮ ದುರದೃಷ್ಟಕ್ಕೆ ಆವ ಕೆಲಸವೂ ನೆರವೇರುವುದಿಲ್ಲ. ಮಧುಸೂದನಶರ್ಮನು ನಮ್ಮ ಯಜಮಾನರಿಗೆ ಹಣ ಕೊಡಬೇಕಾಗಿದೆಯಷ್ಟೇ. ಅವರ ಹತ್ತಿರಕ್ಕಾದರೂ ಹೋಗಿ, ಅವರನ್ನೇ ಯಾಚಿಸುವೆನು. ಧರ್ಮದ ಮೇಲೆ ದೃಷ್ಟಿಯಿಟ್ಟು, ಅವರು ಕೊಟ್ಟರೆ ಕೊಡಲಿ, ಇಲ್ಲವಾದರೆ ನನ್ನ ಹಣೆಯಲ್ಲಿ ಬರೆದಂತಾಗಲಿ' ಆಕೆಯು ಈ ರೀತಿಯಲ್ಲಿ ಹೇಳಿದ್ದಳು. ನಾನು ದೇವಸ್ಥಾನಕ್ಕೆ ಹೋಗುತ್ತಿದ್ದಾಗ ಆಕೆಯು ರಾಮನಗರಕ್ಕೆ ಹೋಗುತಿದ್ದಳೋ ಇಲ್ಲವೋ ನನಗೆ ತಿಳಿಯದು.

ನಾನು—ಆಕೆಯು ತಮ್ಮ ಹತ್ತಿರ ಕೊಟ್ಟಿದ್ದ ಪತ್ರಗಳು ತಮ್ಮಲ್ಲಿಯೇ ಇರುವುವೇ ? ಹಾಗೆ ಇರುವಲ್ಲಿ ಅಡ್ಡಿಯೇನೂ ಇಲ್ಲದಿದ್ದರೆ ಅವುಗಳನ್ನು ನನಗೆ ತೋರಿಸಬಹುದು.

ನಾಗೇಂದ್ರ—ಅಗತ್ಯವಾಗಿಯೂ ತೋರಿಸುವೆನು. ತಮಗೆ ತೋರಿಸದೇ ಮತ್ತಾರಿಗೆ ತೋರಿಸಬೇಕು.

ಹೀಗೆ ಹೇಳಿ ನಾಗೇಂದ್ರ ಭೂಷಣನು ಪತ್ರಗಳನ್ನು ತರಲು ಹೊರಟು ಹೋದನು. ನಾನು ಅಲ್ಲಿಯೇ ಕುಳಿತುಕೊಂಡು ಆಲೋಚಿಸಿದೆನು—

"ಸರಳಕುಮಾರಿಯು ಹಣ ಕೇಳುವುದಕ್ಕಾಗಿ ಮಧುಸೂದನನ ಬಳಿಗೆ ಆ ದಿನ ಸಾಯಂಕಾಲವೇ ಹೋಗಿರಬೇಕು. ಆದರೆ ಆಕೆಯು ಮಧುಸೂದನನನ್ನು ನೋಡಿದಳೋ ಇಲ್ಲವೋ, ಅದಕ್ಕೆ ಪ್ರಮಾಣವೇನೂ ಸಿಕ್ಕಿಲ್ಲ. ಹಣ ಕೇಳುವುದಕ್ಕೆ ಬಂದಳಲ್ಲಾ ಎಂಬ ಹೊಟ್ಟೆಯುರಿಯಿಂದ ಮಧುಸೂದನನು ಆಕೆಯನ್ನು ಕೊಲ್ಲಿಸಿದನೋ ಇಲ್ಲವೋ ಅದೂ ಗೊತ್ತಾಗುವುದಿಲ್ಲ. ಮಧುಸೂದನನಾದರೂ ಬದುಕಿರಬಹುದಾಗಿತ್ತು. ಅವನನ್ನು ಆರೋ ದೇವತೆಗೆ ಬಲಿಕೊಟ್ಟಿರುವರು. ಇದರ ಚಮತ್ಕಾರವೇನೋ, ಬಲಿಯನ್ನು ಸ್ವೀಕರಿಸಿದ ಭುವನೇಶ್ವರಿಯೊಬ್ಬಳೇ ಬಲ್ಲಳು.



# ದ್ವಿ ತೀ ಯ ಖಂ ಡ

---

## ಮೊದಲನೆಯ ಅಧ್ಯಾಯ

ನಾಗೇಂದ್ರ ಭೂಷಣನು ತನ್ನಲ್ಲಿದ್ದ ಪತ್ರಗಳನ್ನು ತೆಗೆದುಕೊಂಡು ಹಿಂದಿರುಗಿ ಬಂದನು. ನಾನು ಅವುಗಳನ್ನು ಪರೀಕ್ಷಿಸಿ ನೋಡಲಾಗಿ, ಮಧುಸೂದನ ಶರ್ಮನು ವಿಶ್ವನಾಥನ ಹಣದಿಂದ ಹಣಗಾರನಾಗಿರುವನೆಂಬುದು ಸ್ಪಷ್ಟವಾಗಿ ಗೊತ್ತಾಯಿತು.

ಅನಂತರ ನಾನು ನಾಗೇಂದ್ರನೊಡನೆ ಕೊಂಚ ಹೊತ್ತು ಆಮಾತು ಈಮಾತು ಆಡುತ್ತಿದ್ದು, ಅವನಿಂದ ಅಪ್ಪಣೆಯನ್ನು ತೆಗೆದುಕೊಂಡು ಹೊರಟೆನು. ದಾರಿಯಲ್ಲಿ ಬರುತ್ತಾ ನನಗೆ ಈ ರೀತಿಯಲ್ಲಿ ಆಲೋಚನೆಯುಂಟಾಯಿತು. ನಾಗೇಂದ್ರನ ಭಾವಭಂಗಿಗಳಿಂದ ಮೊದಲು ಮೊದಲು ಆತನಲ್ಲಿ ನನಗೆ ಸಂಶಯ ತೋರಿಬಂದಿತು, ಆದರೆ ಚೆನ್ನಾಗಿ ಪರಿಶೀಲಿಸಿ ನೋಡಿದುದರಲ್ಲಿ ಆ ಸಂಶಯವು ದೂರವಾಗಿ ತೊಲಗಿತು. ಆವ ಸಂಧ್ಯಾಕಾಲದಲ್ಲಿ ನಾಗೇಂದ್ರನು ಸರಳೆಯನ್ನು ನೋಡಿದನೋ ಆ ಸಂಧ್ಯಾಕಾಲದ ಅನಂತರದಲ್ಲಿ ನಡೆದ ವಿಚಿತ್ರಘಟನೆಯನ್ನು ನಾಗೇಂದ್ರನು ಸರ್ವಪ್ರಕಾರದಿಂದಲೂ ಕಾಣನು.

ಸರಳೆಯು ತನಗೆ ಆಧಾರಭೂತನಾಗಿದ್ದ ನಾಗೇಂದ್ರನಿಗೆ ಕೆಲಸಹೋಯಿತೆಂದು ಕೇಳಿ ಬಹಳ ವ್ಯಸನಪಟ್ಟವಳಾಗಿ, ಬೇರೆಯ ಕಡೆಯಲ್ಲಿ ಅನ್ನವನ್ನು ಹುಟ್ಟಿಸಿಕೊಳ್ಳುವುದಕ್ಕಾಗಿ ಬೇರೊಂದಾಲೋಚನೆಯನ್ನು ಮಾಡಿದಳು. ತನ್ನ ಗಂಡನಿಂದ ಮಧುಸೂದನನು ಅನೇಕ ದ್ರವ್ಯವನ್ನು ತೆಗೆದುಕೊಂಡು ತನ್ನ ಗಂಡನಿಗೆ ಮೋಸಮಾಡಿರುವನೆಂದು ನಾಗೇಂದ್ರನಿಂದ ಕೇಳಿ ತಿಳಿದುಕೊಂಡಳು. ತನಗೂ ತನ್ನ ತಾಯಿಗೂ ಕೇವಲವಾಗಿ ಅನ್ನಕ್ಕೆ ಅಭಾವವಾಗಲು, ಹೇಗಾದರೂ ಮಾಡಿ ತನ್ನ ತಾಯಿಯನ್ನಾದರೂ ಕಾಪಿಡಬೇಕೆಂಬ ಆಶೆಯಿಂದ ಮಧುಸೂದನನ ಬಳಿಗೆ ಹೋಗಿಯಾದರೂ ಕೊಂಚಮಟ್ಟಿಗೆ ಅನ್ನಕ್ಕೆ ಮಾರ್ಗವನ್ನು ಕಲ್ಪಿಸಿಕೊಂಡು ಬರಬೇಕೆಂದು ನಿಶ್ಚಯಿಸಿ ತಾನು ರಾಮನಗರಕ್ಕೆ ಹೋಗಿಬರುವ ಸಂಗತಿಯನ್ನು ತನ್ನ ತಾಯಿಗಾಗಲಿ, ನಾಗೇಂದ್ರನಿಗಾಗಲಿ ಹೇಳದೇ ತಾನೊಬ್ಬಳೇ ಹೊರಟು ಹೋದಳು. ದಾರಿಯಲ್ಲಿ ನಾಗೇಂದ್ರನನ್ನು ಕಂಡರೂ ತನ್ನ ಅಭಿಪ್ರಾಯವನ್ನು ಹೊರಪಡಿಸದೇ, ಬೆಳಗಿನಿಂದಲೂ ತನಗೂ ತನ್ನ ತಾಯಿಗೂ ಊಟವಿಲ್ಲದಿರುವುದನ್ನು ಮಾತ್ರ ತಿಳಿಸಿದಳು. ತನ್ನ ತಾಯಿಯು ಹೊಟ್ಟೆಗಿಲ್ಲದೆ ಸಾಯುತ್ತಿದ್ದು

ದನ್ನು ತಾನು ನೋಡಿ ಸಹಿಸಲಾರದೆ ನಾಗೇಂದ್ರನ ಮುಂದೆ ಹೇಳಿದಳೇ ಹೊರತು, ತಾನೊಬ್ಬಳೇ ಉಪವಾಸವಿದ್ದಿದ್ದ ಪಕ್ಷದಲ್ಲಿ ತನ್ನ ಪ್ರಾಣಹೋಗುವ ಹಾಗಿದ್ದರೂ ಆರ ಮುಂದೂ ಹೇಳುತ್ತಿರಲಿಲ್ಲ.

ಪ್ರತಿನಿತ್ಯವೂ ತಪ್ಪದೆ ನಾಗೇಂದ್ರಭೂಷಣನಿಂದ ಉಪಕಾರ ಹೊಂದುತ್ತಿರುವುದು ತನಗೆ ನಾಚುಗೆಕೇಡೆಂದು ಸರಳೆಯು ತಿಳಿದವಳಾಗಿ ತನ್ನ ಮನೋಗತವನ್ನು ವ್ಯಾಜಾಂತರದಿಂದ ನಾಗೇಂದ್ರನಿಗೆ ತಿಳಿಸಿರುವಳು. ಕೆಲಸವನ್ನು ಕಳೆದುಕೊಂಡ ನಾಗೇಂದ್ರನು ತನ್ನನ್ನೇ ತಾನು ಕಾಪಿಟ್ಟುಕೊಳ್ಳಲಾರದವನಾಗಿರಲು ಅನಾಥರಾದ ಪರಸ್ತ್ರೀಯರಿಬ್ಬರನ್ನು ಅವನು ಕಾಪಿಡುವ ಬಗೆ ಯೆಂತಹದೆಂಬುದನ್ನು ಸರಳೆಯು ತಿಳಿಯದೇ ಇರಲಿಲ್ಲ. ದಾರಿಯಲ್ಲಿ ಆಕೆಯು ನಾಗೇಂದ್ರನನ್ನು ನೋಡಿದುದು ನಿಜ, ಆದರೆ ಆಕೆಯು ಆವ ಉದ್ದೇಶದಿಂದ ಎಲ್ಲಿಗೆ ಹೋಗಬೇಕೆಂದಿದ್ದಳೋ ಆ ವಿಷಯದಲ್ಲಿ ಸರಿಯಾದ ಪ್ರಮಾಣವೇನೂ ದೊರೆಯುವುದಿಲ್ಲ. ಇಷ್ಟು ಸಂದರ್ಭಗಳನ್ನು ಪರೀಕ್ಷಿಸಿ ನೋಡಿದುದರಲ್ಲಿ ಸರಳೆಯು ಹೊರಗೆ ಹೊರಡುವುದಕ್ಕೆ ನಾಗೇಂದ್ರನ ಸಲಹೆಗಳೇ ಮುಖ್ಯ ಕಾರಣಗಳು. ಇಲ್ಲವೆ, ಸಂಜೆಯಾದ ಮೇಲೆ ಭಿಕ್ಷೆ ಬೇಡಿ ತಾಯಿಯ ಮಟ್ಟಿಗೆ ಅನ್ನವನ್ನು ಸಂಪಾದಿಸಿಕೊಂಡು ಬರುವುದಕ್ಕೆ ಯತ್ನಮಾಡಿದರೆ ಮತ್ತಾರಿಗೂ ಗೊತ್ತಾಗುವುದಿಲ್ಲವೆಂಬ ಅಭಿಪ್ರಾಯದಿಂದ ಆಕೆಯು ಹೊರಗೆ ಹೊರಟಿದ್ದರೂ ಹೊರಟಿರಬಹುದು.

ಪ್ರಕೃತಸಂದರ್ಭದಲ್ಲಿ ಮತ್ತೊಂದು ವಿಷಯವಾಗಿ ಅನುಮಾನಪಟ್ಟರೂ ಪಡಬಹುದು. ಸರಳೆಗೆ ಹೊಟ್ಟೆಗಿಲ್ಲದೆ ದಿನಗಳನ್ನು ಕಳೆವುದೇ ಅತಿಪ್ರಯಾಸಕ್ಕೆ ಬರಲು, ಆಕೆಯು ದಿಕ್ಕು ತೋರದವಳಾಗಿ ಮಾನಾಪಮಾನಗಳನ್ನು ಲೆಕ್ಕಿಸದೇ ಒಂದು ಸಲವಾದರೂ ಮಧುಸೂದನನ ಮನೆಗಾದರೂ ಹೋಗಿ, ತನಗೆ ಬರಬೇಕಾದ ಹಣವನ್ನು ಕೇಳಿಕೊಂಡು ಬರೋಣವೆಂಬುದಾಗಿ ಸುಂಕನಹಳ್ಳಿಯಿಂದ ರಾಮನಗರಕ್ಕೆ ಹೋಗಿರಬಹುದು. ಅಲ್ಲಿ ಮಧುಸೂದನನನ್ನು ನೋಡಿ ತನ್ನ ಗಂಡನಿಗೆ ಬರಬೇಕಾಗಿದ್ದ ಹಣವನ್ನು ತಗಾದೆ ಮಾಡಿ, ಹಣ ಕೊಡದೇ ಹೋದಲ್ಲಿ ನ್ಯಾಯಸ್ಥಾನದ ಮುಖಾಂತರವಾದರೂ ಹಣವನ್ನು ಬರಮಾಡಿಕೊಳ್ಳುವೆನೆಂದು ಆಕೆಯು ಮಧುಸೂದನನನ್ನು ಹೆದರಿಸಿದ್ದರೂ ಹೆದರಿಸಿರಬಹುದು. ಮಧುಸೂದನನು, 'ಹಣವೂ ಇಲ್ಲ, ಏನೂ ಇಲ್ಲ, ಹೋಗಾಚೆಗೆ' ಎಂದು ಆ ಅನಾಥೆಯನ್ನು ಕುತ್ತಿಗೆ ಹಿಡಿದು ಹೊರಗೆ ದಬ್ಬಿರಬಹುದು. ಸಂಕಟದಿಂದ ಸರಳೆಯು ಮಧುಸೂದನನನ್ನು ಒಂದೆರಡು ನಿಷ್ಠುರವಾದ ಮಾತುಗಳಿಂದ ಬೈದಿದ್ದರೂ ಬೈದಿರಬಹುದು.

ಆವನು ಅನ್ಯಾಯದಿಂದ ಹಣವನ್ನು ಸಂಪಾದಿಸಿ ಹಣಗಾರನೆನಿಸುವನೋ, ಅವನು ಸಾಧಾರಣವಾಗಿ ತಾನು ಮಾಡಿದ ಅನ್ಯಾಯವನ್ನು ಒಪ್ಪುವುದಿಲ್ಲ. ಲೋಕದ ರೀತಿಯೇ ಹೀಗೆ! ಕಲಿಯ ಧರ್ಮವೇ ಇದು !

ವಿಶ್ವನಾಥನ ಮರಣಾನಂತರ ಆತನ ಹೆಂಡತಿಯ ಸಂಸಾರಭಾರವನ್ನು ತಾನೇ ವಹಿಸಿಕೊಂಡುದು ನೋಡಿದರೆ, ಅದರಲ್ಲಿ ಏನೋ ಒಂದು ದುರಭಿಸಂಧಿಯು ಇದ್ದಹಾಗೆ ತೋರುವುದು. ದುಷ್ಟ ಮನುಷ್ಯನಲ್ಲಿ ಈ ರೀತಿಯಾದ ಊಹೆಯನ್ನು ಮಾಡುವುದು ಅಸಂಗತವೆಂದು ಆರೂ ಹೇಳುವುದಿಲ್ಲ. ಒಂದು ವೇಳೆ ಮಧುಸೂದನನಲ್ಲಿ ಎಳ್ಳಷ್ಟಾದರೂ ಒಳ್ಳೆಯ ಗುಣವಿದ್ದಿದ್ದರೆ, ಆತನು ಬಾಳಿ ಬದುಕಿದ ಸರಳೆಯನ್ನು ಒಂದೇ ತಡವೆಗೆ ನಿರ್ಗತಿಕಳನ್ನಾಗಿ ಎಂದಿಗೂ ಮಾಡುತ್ತಿರಲಿಲ್ಲ. ಸರಳೆಯನ್ನು ನಿರ್ಮೂಲವಾಗಿ ಹಾಳುಮಾಡಿ, ವಿಶ್ವನಾಥನಲ್ಲಿದ್ದ ಪತ್ರಗಳೆಲ್ಲವನ್ನೂ ತಾನೇ ತೆಗೆದುಕೊಂಡು, ಆತನಿಗೆ ಬರತಕ್ಕ ಹಣವೆಲ್ಲವನ್ನೂ ತಾನೇ ಅಪಹರಿಸಬೇಕೆಂಬ ದುರಾಶೆಯಿಂದ ಮಧುಸೂದನನು ಈ ರೀತಿಯಾದ ಸ್ವೇಚ್ಛಾಪ್ರವರ್ತನೆಯಲ್ಲಿ ತೊಡಗಿದ್ದರೂ ತೊಡಗಿರಬಹುದು. ಸರಳೆಯು ಆತನನ್ನು ನೋಡಿ ಹೆದರಿಸಿದುದರಿಂದ, ಶತ್ರುಶೇಷವನ್ನು ಕಳೆದುಕೊಳ್ಳಬೇಕೆಂದು ನಿಶ್ಚಯ ಮಾಡಿ, ಸರಳೆಯ ಕೊಲೆಯಲ್ಲಿ ಆತನು ಬದ್ಧಕಂಕಣನಾಗಿದ್ದರೂ ಇರಬಹುದು.

ಒಳ್ಳೆಯದು, ನಾನು ಕೇವಲ ಅನುಮಾನದಿಂದಲೇ ಕಾರ್ಯಸಾಧನೆಗೆ ಮಾರ್ಗವನ್ನು ಹುಡುಕಲಾರಂಭಿಸಿದರೆ ಅನುಮಾನಕ್ಕೆ ತುದಿಮೊದಲೆಂಬುದೇ ಇರುವುದಿಲ್ಲ. ನನ್ನ ಅನುಮಾನವೆಲ್ಲವೂ ನಿಜವೆಂಬುದಕ್ಕೆ ಪ್ರಮಾಣವೆಲ್ಲಿಯದು ? ಆವಾಗಲೂ ಅನುಮಾನದ ಮೇಲೆಯೇ ಭಾರವನ್ನು ಹಾಕಿ, ಕೆಲಸಮಾಡುವುದೂ ಯುಕ್ತವಲ್ಲ. ಪ್ರಕೃತ, ಮಧುಸೂದನನು ಸರಳೆಯನ್ನು ಕೊಲ್ಲಿಸಿದನೆಂದು ಹೇಳೋಣ, ಅದಕ್ಕೆ ಸರಿಯಾದ ಪ್ರಮಾಣವೇನು ? ಮತ್ತೊಬ್ಬರನ್ನು ಕೊಲ್ಲಿಸಿದವನು ಅದೇ ದಿವಸವೇ ತಾನೂ ಸತ್ತುಹೋದುದಕ್ಕೆ ಕಾರಣವೇನು ? ಹಾಗಾದರೆ ಅವನನ್ನು ಕೊಂದವರಾರು ?

ಈ ರೀತಿಯಲ್ಲಿ ಬಗೆಬಗೆಯಾಗಿ ಆಲೋಚನೆ ಮಾಡುತ್ತಾ ನಾನು ಮನೆಗೆ ಹಿಂದಿರುಗಿ ಬಂದೆನು. ನಾಗೇಂದ್ರಭೂಷಣನಿಂದ ಸಮಸ್ತ ವಿಷಯವೂ ತಿಳಿಯುವುದೆಂದು ನಾನು ತಿಳಿದುಕೊಂಡಿದ್ದೆನು, ಆದರೆ ನಾನು ಉದ್ದೇಶಪಟ್ಟಷ್ಟು ಅನುಕೂಲವಾಗಲಿಲ್ಲ. ಅನೇಕ ವರ್ಷಗಳು ನಾನು ಪತ್ತೇದಾರನಾಗಿ ಕೆಲಸಮಾಡಿರುವೆನು, ಆದರೆ ಇಂತಹ ವಿಲಕ್ಷಣವಾದ ನರಹತ್ಯೆಯನ್ನು ನಾನೆಂದಿಗೂ ನೋಡಿದವನಲ್ಲ.

## ಎರಡನೆಯ ಅಧ್ಯಾಯ

ಮರುದಿನ ನಾನು ಮಧುಸೂದನನ ಮನೆಗೆ ಹೋದೆನು. ಅಲ್ಲಿ ಯಜಮಾನನ ಸೋದರಳಿಯನಾದ ಶ್ರೀವರ್ಮ ಶಿವಕುಮಾರನು ನನ್ನನ್ನು ನೋಡಿದ ಕೂಡಲೆ ಸಂತೋಷದಿಂದ ಮನೆಯೊಳಗೆ ಕರೆದುಕೊಂಡು ಹೋಗಿ, ತಾವು ಬಂದ ಉದ್ದೇಶ ವೇನೆಂದು ಕೇಳಿದನು.

ನಾನು—ತಮ್ಮ ಸೋದರ ಮಾಮನನ್ನು ಕೊಂದವರಾರೆಂಬುದನ್ನು ಕಂಡು ಹಿಡಿಯುವುದಕ್ಕೋಸ್ಕರ ನಾನಿಲ್ಲಿಗೆ ಬಂದುದು.

ಶಿವಕುಮಾರ—ಧೀರೇಂದ್ರರೆಂಬ ಪತ್ತೇದಾರರು ತಾವೇನೋ? ಈ ಕೊಲೆಯ ವಿಷಯದಲ್ಲಿ ಅನುಸಂಧಾನಕ್ಕೋಸ್ಕರ ರಕ್ಷಾಧಿಕರಣದ ದೊಡ್ಡ ಅಧಿಕಾರಿಗಳಲ್ಲಿ ಪ್ರಾರ್ಥನೆ ಮಾಡಿಕೊಂಡಿದ್ದೆನು. ಅವರು ತಾನೇ ತಮ್ಮನ್ನು ಕಳುಹಿಸಿದವರು?

ನಾನು—ಅಹುದು; ಅವರೇ ನನ್ನನ್ನು ಈ ಕಾರ್ಯದಲ್ಲಿ ನಿಯಮಿಸಿರುವರು.

ಶಿವಕುಮಾರ—ನನ್ನಿಂದ ತಾವು ತಿಳಿಯಬೇಕಾದ ಅಂಶವೇನಾದರೂ ಉಂಟೇ?

ನಾನು—ಉಂಟು. ತಮ್ಮಲ್ಲಿ ಕೆಲಸಕ್ಕಿರುವ ಗೋಪಿಕಾನಾಥನನ್ನು ಇಲ್ಲಿಗೆ ಕಳುಹಿಸಿ ಕೊಡೋಣವಾಗಲಿ. ನಾನು ಮೊದಲು ಆತನಲ್ಲಿ ಕೆಲವು ಮಾತುಗಳನ್ನಾಡಬೇಕು.

ನನ್ನ ಮಾತುಗಳನ್ನು ಕೇಳಿದ ಕೂಡಲೆ ಶಿವಕುಮಾರನು, ಗೋಪೀ! ಎಂದು ಸೇವಕನನ್ನು ಗಟ್ಟಿಯಾಗಿ ಕೂಗಿದನು. ನಾನು ಆಗ ಆತನ ಮುಖವನ್ನೇ ನೋಡುತ್ತಿದ್ದೆನು. ಸಂದೇಹಾಸ್ಪದವಾದ ಆವ ಭಾವವೂ ಶಿವಕುಮಾರನ ಮುಖದಲ್ಲಿ ಕಂಡು ಬರುತ್ತಿರಲಿಲ್ಲ.

ಆ ಮೇಲೆ, ನಾನು—ಮಧುಸೂದನನು ಕೊಲೆಯಾದನೆಂಬುದನ್ನು ಮೊದಲು ಕಂಡವರಾರು? ಎಂದು ಪ್ರಶ್ನೆಮಾಡಿದೆನು.

ಶಿವಕುಮಾರ—ನಮ್ಮ ಗೋಪಿಯೇ ಮೊದಲು ನೋಡಿದವನು. ನಮ್ಮ ಮಾಮನು ಅಡಿಗಡಿಗೂ ತಂಬಾಕನ್ನು ಸೇವಿಸುತ್ತಿದ್ದನು. ತಂಬಾಕನ್ನು ತೀಡಿ ಕೊಡುವುದಕ್ಕೋಸ್ಕರ ಆಗಿಂದಾಗ ಆತನ ಹತ್ತಿರ ಹೋಗಿಬರುತ್ತಿದ್ದನು.

ನಾನು—ಗೋಪಿ! ನೀನು ಆವಾಗ ಯಜಮಾನನ್ನು ಆ ರೀತಿಯಲ್ಲಿ ನೋಡಿದೆ ?

ಗೋಪಿಕಾನಾಥ—ನಾನು ರಾತ್ರಿ ಸುಮಾರು ಹನ್ನೊಂದು ಗಂಟೆಯ ಸಮಯದಲ್ಲಿ ಭುವನೇಶ್ವರಿಯ ಪಾದಮೂಲದಲ್ಲಿ ನಮ್ಮ ಯಜಮಾನನನ್ನು ನೋಡಿದೆನು. ತಲೆಯು ದೇವತೆಯ ಹಿಂದೆ ಬಿದ್ದಿತ್ತು. ದೇಹವು ದೇವತೆಯ ಮುಂದೆ ಬಿದ್ದಿತ್ತು. ರಕ್ತವು ಅಲ್ಲಲ್ಲಿ ಚೆಲ್ಲಾಡಿತ್ತು.

ನಾನು—ಆಮೇಲೆ ನೀನೇನ ಮಾಡಿದೆ ?

ಗೋಪಿ—ನಾನು ಗಟ್ಟಿಯಾಗಿ ಅರಚಿಕೊಂಡು ಶಿವಕುಮಾರನನ್ನು ಕೂಗಿದೆನು. ನಮ್ಮ ಯಜಮಾನನ ಮನೆಯು ದೇವಸ್ಥಾನದ ಪಕ್ಕದಲ್ಲಿಯೇ ಇರುವುದರಿಂದ ನಾನು ದೇವಸ್ಥಾನದಲ್ಲಿದ್ದುಕೊಂಡು ಕೂಗಿದರೆ ಈ ಮನೆಯಲ್ಲಿ ಘಂಟಾಘೋಷವಾಗಿ ಕೇಳಿಸುವುದು.

ನಾನು—ನೀನು ಕೂಗಿದೊಡನೆಯೇ ಶಿವಕುಮಾರನು ಬಂದರೊ ?

ಗೋಪಿ—ಇಲ್ಲ. ಅವರು ಮನೆಯಲ್ಲಿ ನಿದ್ರೆಹೋಗುತಿದ್ದರು.

ನಾನು—ಹಾಗಾದರೆ ನೀನು ಮೊದಲು ಆರನ್ನು ನೋಡಿದೆ?

ಗೋಪಿ—ಶಿವಕುಮಾರನ ಅಣ್ಣನು ಕೋಣೆಯಲ್ಲಿ ಕುಳಿತಿದ್ದರು. ಆಗ ಜೋರೋ ಎಂದು ಮಳೆಯು ಸುರಿಯುತ್ತಿದ್ದುದರಿಂದ, ಅವರು ತಮ್ಮ ಮನೆಗೆ ಹೋಗುವುದಕ್ಕಾಗದೇ ಅಲ್ಲಿಯೇ ಇದ್ದರು. ಮಳೆ ಕೊಂಚಮಟ್ಟಿಗೆ ನಿಲ್ಲಲು, ಅವರು ಮನೆಗೆ ಹೋಗುವುದರಲ್ಲಿದ್ದರು. ಅವನು ನನ್ನ ಚೀತ್ಕಾರ ಧ್ವನಿಯನ್ನು ಕೇಳಿ ದೇವಸ್ಥಾನದೊಳಗೆ ಓಡಿಬಂದು, ಏನಾಯಿತು, ಏನಾಯಿತು? ಎಂದು ಕೇಳಿದರು. ನಮ್ಮ ಯಜಮಾನರು ಕೊಲೆಯಾಗಿರುವರು. ನಮ್ಮ ಯಜಮಾನರನ್ನು ಆರೋ ದೇವತೆಗೆ ಬಲಿಕೊಟ್ಟಿರುವರು, ಎಂದು ಹೇಳಿದೆನು. ಅದಕ್ಕೆ ಅವರು, ಏನು ? ಕೊಲೆ, ಕೊಲೆ ಎಂದರೇನೋ? ಕೊಲೆಯಾದವರಾರೋ ? ಕೊಲೆ ಮಾಡಿದವರಾರೋ! ಎಂದು ಗಾಬರಿಯಿಂದ ಅತ್ತಿತ್ತ ನೋಡಲಾರಂಭಿಸಿದರು.

ನಾನು—ಇದನ್ನು ನೋಡಿ ಅವರೇನ ಮಾಡಿದರು ?

ಗೋಪಿ—ಅವರಿದನ್ನು ನೋಡಿ ಹೆದರಿದವರಾಗಿ ಶಿವಕುಮಾರನನ್ನು ಗಟ್ಟಿಯಾಗಿ ಕೂಗಿಕೊಂಡರು. ನಾನು ಕೂಗಿದಾಗಲೇ ಮನೆಯಲ್ಲಿ ೩-೪ ಜನ ಬೆಚ್ಚಿಬಿದ್ದೆದ್ದರು. ಅವರು ಕೂಗಿದ ಕೂಡಲೆ ಮನೆಯವರೆಲ್ಲರೂ ಎಚ್ಚೆತ್ತರು. ಆ ಕೂಡಲೆ ಶಿವಕುಮಾರರು ನಾವಿದ್ದಲ್ಲಿಗೆ ಓಡಿಬಂದರು. ಯಜಮಾನಿಯರೂ

ಓಡಿಬಂದು ಈ ದುರವಸ್ಥೆಯನ್ನು ನೋಡಿ ಅಲ್ಲಿಯೇ ಮೂರ್ಛೆಹೋದರು. ಉಳಿದವರೆಲ್ಲರೂ ಯಜಮಾನನಿಗುಂಟಾದ ಗತಿಯನ್ನು ನೋಡಿ ಬಿಕ್ಕಿಬಿಕ್ಕಿ ಅಳತೊಡಗಿದರು. ಶಿವಕುಮಾರನ ಅಣ್ಣಂದಿರು ನನ್ನನ್ನು ಕುರಿತು, ರಕ್ಷಾಧಿಕರಣಕ್ಕೆ ಬೇಗಹೋಗಿ ಯಾಮಿಕರನ್ನು ಇಲ್ಲಿಗೆ ಕರೆದುಕೊಂಡು ಬರುವಂತೆ ಹೇಳಿದರು. ನಾನು ಅವರ ಅಪ್ಪಣೆಯ ಮೇರೆ ಯಾಮಿಕರನ್ನು ಕರೆತಲು ಹೊರಹೊರಟೆನು.

ನಾನು—(ಶಿವಕುಮಾರನನ್ನು ನೋಡಿ) ತಮಗೆ ಆರ ಮೇಲೆ ಸಂದೇಹವಿರುವುದು ?

ಶಿವಕುಮಾರ—ಹಾಗೆಂದರೇನು ? ನನಗೆ ಆರ ಮೇಲೂ ಸಂದೇಹವಿಲ್ಲ

ನಾನು—ತಮ್ಮ ಮಾವನಿಗೆ ಆರಾದರೂ ಶತ್ರುಗಳಿದ್ದರೇ ?

ಶಿವ—ಅದು ನನಗೆ ತಿಳಿಯದು. ಆರ ಮಾತನ್ನು ಕೇಳಿದರೆ ಶತ್ರು ಕೂಡ ಮಿತ್ರನಾಗಿ ಪರಿಣಮಿಸುವನೋ ಅಂತಹ ಮಧುಸೂದನಶರ್ಮನು ಅತ್ಯಂತ ಮಧುರಭಾಷಿಯಲ್ಲವೆ ! ನನಗೆ ಬುದ್ಧಿ ತಿಳಿದಾಗಿನಿಂದಲೂ ಮಧುಸೂದನನು ಆರೊಡನೆಯಾದರೂ ಜಗಳವಾಡಿದುದನ್ನು ನಾನು ಎಂದಿಗೂ ಕಾಣೆನು. ಆತನ ವಿಷಯದಲ್ಲಿ ಶತ್ರುತ್ವವನ್ನು ಸಾಧಿಸಿದವರು ಆರೂ ಇಲ್ಲವೆಂತಲೇ ಹೇಳಬಹುದು.

ನಾನು—ತಾವು ಆವಾಗಲೂ ಈ ಮನೆಯಲ್ಲಿಯೇ ಇರೋಣವಾಗುತ್ತದೆಯೋ ?

ಶಿವ—ಅಹುದು.

ನಾನು—ಅದೇನು ? ನಿಮ್ಮ ಸ್ವಂತ ಮನೆಯಿದ್ದರೂ, ಅದನ್ನು ಬಿಟ್ಟು ಇಲ್ಲಿಯೇ ವಾಸವಾಗಿರಲು ಕಾರಣವೇನು ?

ಶಿವ—ಕಾರಣವಿದೆ, ನಮ್ಮ ಮಾವನು ನನ್ನನ್ನು ಬಹಳವಾಗಿ ಪ್ರೀತಿಸುತ್ತಿದ್ದರು. ಅದಕ್ಕಾಗಿಯೇ ನಾನು ಇಲ್ಲಿಯೇ ಇರುತ್ತಿರುವೆನು. ನಮ್ಮ ಮಾವನಿಗೆ ತುಂಬಾ ಮಕ್ಕಳಾಗಿ, ಎಲ್ಲವೂ ಒಂದಾಗುತಲೊಂದು ಸತ್ತುಹೋದುವು. ಅನಂತರ ನನ್ನ ತಾಯಿಯನ್ನು ಬೇಡಿ ನನ್ನನ್ನು ಮನೆಯಲ್ಲಿ ತಂದಿಟ್ಟುಕೊಂಡು ಮಗನಂತೆಯೇ ಕಾಪಿಡುತ್ತಿರುವರು. ಆದುದರಿಂದ ನಾನು ಅವರ ಮಗನೆಂದೇ ಹೇಳಬೇಕು.

ನಾನು—ತಮ್ಮ ತಂದೆಯು ಬದುಕಿರುವರೇ ?

ಶಿವ—ಬದುಕಿರುವರು.

ನಾನು—ಅವರು ಈಗ ಎಲ್ಲಿರುವರು ?

ಶಿವ—ಈ ರಾಮನಗರದಲ್ಲಿಯೇ ಇರುವರು. ಅವರು ಅಷ್ಟೇನೂ ತಿಳಿದವರಲ್ಲ. ಅವರಿಗೆ ಜೀವನಕ್ಕೆ ಏನೂ ಮಾರ್ಗವಿಲ್ಲದುದರಿಂದ ನನ್ನ ಮಾಮನು ಅವರಿಗೆ ತಿಂಗಳಿಗೆ ೫೦ ರೂಪಾಯಿಗಳ ವರೆಗೂ ಸಾಹಾಯ್ಯಮಾಡುತ್ತಿದ್ದರು. ಇದಲ್ಲದೆ ನನಗೆ ಆಗಾಗ ಸಿಕ್ಕುತ್ತಿದ್ದ ಕೊಂಚ ಹಣವನ್ನೂ ಅವರಿಗೆ ಕಳುಹಿಸಿ ಬಿಡುತ್ತಿದೆನು.

ನಾನು—ನಿಮ್ಮ ಮಾಮನು ನಿಮ್ಮ ಅಣ್ಣನನ್ನು ಬಿಟ್ಟು ನಿಮ್ಮನ್ನು ಸಾಕುಮಗನನ್ನಾಗಿ ಮಾಡಿಕೊಳ್ಳಲು ಕಾರಣವೇನು ?

ಶಿವ—ನಮ್ಮ ತಂದೆತಾಯಿಗಳು ಆತನನ್ನು ಕೊಡಲು ಒಪ್ಪಲಿಲ್ಲ. ಇದರ ಮೇಲೂ ಆತನು ವಿಶೇಷವಾಗಿ ಓದಿದವನಲ್ಲ; ಆತನ ಸ್ವಭಾವವೂ ಅಷ್ಟು ಸುಂದರವಾಗಿರಲಿಲ್ಲ. ಆದುದರಿಂದ ನಮ್ಮ ಮಾಮನು ಆತನನ್ನು ಅಷ್ಟು ಹೆಚ್ಚಾಗಿ ಪ್ರೀತಿಸುತ್ತಿರಲಿಲ್ಲ.

ನಾನು—ತಾವು ತಮ್ಮ ಮಾಮನ ಕಾರ್ಯಗಳಲ್ಲಿ ಸಾಹಾಯ್ಯ ಮಾಡುತ್ತಿದ್ದಿರಾ ?

ಶಿವ—ನಾನು ಎರಡು ಕೆಲಸವನ್ನೂ ಮಾಡಿಕೊಳ್ಳುತ್ತಿರುವೆನು. ನಾನು ವಕೀಲ ಪರೀಕ್ಷೆಗೆ ಓದುತ್ತಿರುವೆನು, ಆಗಿಂದಾಗ ನಮ್ಮ ಮಾಮನು ಹೇಳುತ್ತಿದ್ದ ಕೆಲಸವನ್ನೂ ಮಾಡುತ್ತಿರುವೆನು.

ನಾನು—ತಮ್ಮ ಮನೆಗೆ ವಿಶೇಷವಾಗಿ ಬರುತ್ತಿದ್ದ ಜನಗಳನ್ನು ತಾವು ಬಲ್ಲಿರಾ ?

ಶಿವಕುಮಾರನು ತನಗೆ ತಿಳಿದ ಕೆಲವರ ಹೆಸರನ್ನು ಹೇಳಿದನು. ಅವರಲ್ಲಿ ಆರ ಮೇಲಾದರೂ ಸಂಶಯವಿರುವುದಾದರೆ ತಿಳಿಸಿರೆಂದು ನಾನು ಕೇಳಿದ್ದರ ಮೇಲೆ, ಆತನು ಆರ ಮೇಲೂ ಸಂಶಯವಿರುವುದಿಲ್ಲವೆಂದು ಖಂಡಿತವಾಗಿಯೂ ಹೇಳಿಬಿಟ್ಟನು.

ನಾನು—ತಮ್ಮ ಅಣ್ಣಂದಿರು ಸ್ವಂತ ಮನೆಯಲ್ಲಿ ತಾನೇ ವಾಸವಾಗಿರುವರು ? ಇಲ್ಲಿಗೇನೂ ಅವರು ಬರುವುದಿಲ್ಲವಷ್ಟೇ ?

ಶಿವ—ಅವರು ಸ್ವಂತ ಮನೆಯಲ್ಲಿಯೇ ವಾಸವಾಗಿರುವರು. ಆಗಿಂದಾಗ ಇಲ್ಲಿಗೆ ಬರುವುದೂ ಉಂಟು.

ನಾನು—ನಿಮಗೂ ಅವರಿಗೂ ಪರಸ್ಪರ ಪ್ರೀತಿಯಿರುವುದಷ್ಟೇ ?

ಶಿವ—ಪ್ರೀತಿಯಿಲ್ಲದಿರಲು ಕಾರಣವೇನು ?

ನಾನು—ನಿಮ್ಮ ವಿಷಯದಲ್ಲಿ ಅವರಿಗೆ ಆವಾಗಲೂ ವಿರೋಧವಿಲ್ಲವಷ್ಟೇ ?

ಶಿವ—ಇಲ್ಲ. ಅವರು ನನ್ನನ್ನು ಆವಾಗಲೂ ತಮ್ಮನಂತೆ ಪ್ರೀತಿಸುವರು.

ನಾನು—ಅದು ಸರಿ. ನೀವು ಮಾವುನ ಆಶ್ರಯದಲ್ಲಿದ್ದು ಸುಖವಾಗಿ ತಿಂದು ಉಂಡು ಉಟ್ಟು ಆನಂದಪಡುವಿರಲ್ಲ! ಅದನ್ನು ನೋಡಿಯಾದರೂ ಅವರಿಗೆ ಹೊಟ್ಟೆಯ ಕಿಚ್ಚು ಉಂಟಾಗಿಲ್ಲವೇ ?

ಶಿವ—ಅದು ನನಗೆ ಗೊತ್ತಾಗುವ ಬಗೆ ಹೇಗೆ ? ಆತನೆಂದಿಗೂ ತನ್ನ ಮನೋಗತವನ್ನು ನನ್ನ ಮುಂದೆ ಹೇಳಿದವನಲ್ಲವೆಂದು ಮಾತ್ರ ನಾನು ಹೇಳಬಲ್ಲೆನು.

ನಾನು—ನಿಮ್ಮ ಅಣ್ಣಂದಿರು ಆಗಾಗ ಇಲ್ಲಿಗೆ ಬರುವುದು ಸರಿಯಷ್ಟೇ. ನಿನ್ನೆಯ ದಿನ ಅವರು ಈ ಮನೆಗೆ ಬಂದುದಕ್ಕೆ ಕಾರಣವೇನಿರಬಹುದು ?

ಶಿವ—ಅವರು ಆವುದೋ ವ್ಯಾಪಾರ ಮಾಡಬೇಕೆಂದು ನಮ್ಮ ಮಾವನಿಂದ ಹಣವನ್ನು ಕೇಳಿ ತೆಗೆದುಕೊಂಡು ಹೋಗುವುದಕ್ಕೆ ಬಂದಿದ್ದರು. ನಮ್ಮ ಮಾವನು ಇದಕ್ಕೆ ಮೊದಲು ಒಂದೆರಡು ಸಲ ೫-೬ ಸಾವಿರ ರೂಪಾಯಿಗಳ ವರೆಗೂ ಸಾಹಾಯ್ಯಮಾಡಿದ್ದರು. ಆಗ ವ್ಯಾಪಾರವು ಕೆಟ್ಟುಹೋಗಿ ಹಣವೆಲ್ಲವೂ ಹಾಳಾಗಿ ಹೋಯಿತು. ಇದನ್ನು ನೋಡಿ ನಮ್ಮ ಮಾವನು ನಮ್ಮಣ್ಣನಿಗೆ ಮತ್ತೆ ಹಣಕಾಸುಗಳನ್ನು ಕೊಡುವುದಿಲ್ಲವೆಂದು ಹೇಳಿಬಿಟ್ಟರು.

ನಾನು—ಈ ಸಲ ನಿಮ್ಮಣ್ಣನು ಏನು ಕೆಲಸ ಮಾಡಬೇಕೆಂದಿರುವರು ?

ಶಿವ—ಅದು ನನಗೆ ಚೆನ್ನಾಗಿ ಗೊತ್ತಿಲ್ಲ.

ನಾನು—ನಿಮ್ಮಣ್ಣನು ಈ ಮನೆಗೆ ಬಂದಾಗ ನಿಮ್ಮನ್ನು ನೋಡಿದ್ದರೋ?

ಶಿವ—ನೋಡಿದ್ದರು.

ನಾನು—ನಿಮ್ಮಣ್ಣನ ಸ್ವಭಾವದಲ್ಲಿ ದೋಷವೇನಾದರೂ ಉಂಟೊ ?

ಶಿವ—ಉಂಟು.

ನಾನು—ಅದೇನು ?

ಶಿವ—ಆತನು ಕೇವಲ ಸ್ತ್ರೀಲಂಪಟನು.

ನಾನು—ಗುರುತರವಾದ ದೋಷವೇ ಸರಿ! ತಮ್ಮ ಮಾಮನು ಇದನ್ನು ಬಲ್ಲವರಾಗಿದ್ದರೋ ?

ಶಿವ—ಮೊದಲು ಮೊದಲು ಗೊತ್ತಿರಲಿಲ್ಲ. ಈಗೀಗ ಗೊತ್ತಾಗುತ್ತ ಬಂದುದರಿಂದ, ನಮ್ಮ ಮಾಮನು ಆತನೊಡನೆ ವಿಶೇಷವಾಗಿ ಮಾತು ಕತೆಗಳನ್ನಾಡುತ್ತಿರಲಿಲ್ಲ.

ನಾನು—ಮೊನ್ನೆ ನಿಮ್ಮಣ್ಣಂದಿರು ನಿಮ್ಮ ಮಾಮನನ್ನು ನೋಡುವುದಕ್ಕೆ ಬಂದಾಗ ನಿಮ್ಮ ಮಾಮನ ಕೋಣೆಯಲ್ಲಿ ಮತ್ತಾರಿದ್ದರು ?

ಶಿವ—ಆರೂ ಇರಲಿಲ್ಲ.

ನಾನು—ಈಸಲ ಬಂದಾಗ ನಿಮ್ಮಣ್ಣನವರಿಗೆ ಹಣ ಕಾಸುಗಳೇನಾದರೂ ಸಿಕ್ಕಿತೋ ?

ಶಿವ—ಇಲ್ಲ. ನಮ್ಮ ಮಾಮನು ಅನೇಕ ಸಲ ಹಣ ಕೊಟ್ಟರೂ ಅದು ಊರ್ಜಿತವಾಗಲಿಲ್ಲವಾದುದರಿಂದ, ಇನ್ನು ಮೇಲೆ ನಿನಗೆ ನಾನೊಂದು ಕಾಸೂ ಕೊಡುವುದಿಲ್ಲವೆಂದು ನಮ್ಮಣ್ಣನಿಗೆ ಹೇಳಿದ ಮಾತನ್ನು ನಮ್ಮಣ್ಣನು ನನಿಗೆ ಹೇಳಿದನು.

ನಾನು—ಅದಕ್ಕೆ ನಿಮ್ಮ ಅಣ್ಣನು ಏನೆಂದರು ?

ಶಿವ—ಹೇಳುವುದೇನು, ನಿರಾಶನಾಗಿ ಹಿಂತಿರುಗಿ ಬಂದನು.

ನಾನು—ನಿಮ್ಮಣ್ಣನು ಅಲ್ಲಿಂದ ಬಂದು ನಿಮ್ಮ ಕೋಣೆಯಲ್ಲಿ ಕುಳಿತು ಕೊಂಡರೂ ?

ಶಿವ—ಅಹುದು.

ನಾನು—ಆಗ ನಿಮ್ಮೊಡನೆ ಮತ್ತೇನು ಮಾತು ನಡೆಯಿತು ?

ಶಿವ—ಅಂತಹ ಮಾತು ಕತೆಗಳೇನೂ ನಡೆಯಲಿಲ್ಲ. ಮಾಮನಿಗೆ ನೀನಾದರೂ ಹೇಳೆಂದು ಆತನು ನನ್ನನ್ನು ಕೇಳಿದನು. ಅದಕ್ಕೆ ನಮ್ಮ ಮಾಮನು ನನ್ನ ಮಾತನ್ನು ಕೇಳುವುದಿಲ್ಲವೆಂದು ಹೇಳಿದೆನು. ಆ ಮೇಲೆ ಆವ ವಿಧವಾದ ಮಾತೂ ನಡೆಯಲಿಲ್ಲ.

ನಾನು—ನಿಮ್ಮ ಮನೆಯಲ್ಲಿ ಸರಳಕುಮಾರಿಯೆಂಬಾಕೆ ಇದ್ದಳೋ?

ಶಿವ—ಇದ್ದಳು.

ನಾನು—ಅವಳು ಏತಕ್ಕಾಗಿ ಇದ್ದಳು?

ಶಿವ—ನಮ್ಮ ಮನೆಯ ಅಡುಗೆಯಲ್ಲಿ ಸಾಹಾಯ್ಯ ಮಾಡುತಿದ್ದಳು.

ನಾನು—ಆಕೆಯು ನಿಮ್ಮ ಮನೇ ಬಿಟ್ಟು ಹೊರಟು ಹೋದುದಕ್ಕೆ ಕಾರಣವೇನು?

ಶಿವ—ಆಕೆಯು ಬಾಲವಿಧವೆಯು, ಚಿಕ್ಕ ವಯಸ್ಸಿನಲ್ಲಿಯೇ ಗಂಡನು ಸತ್ತುಹೋದುದರಿಂದ ಆಕೆಯ ಚರಿತ್ರೆಯು ಕೆಟ್ಟುಹೋಗಿರಬಹುದು. ನಮ್ಮ ಮನೆಯಲ್ಲಿದ್ದರೆ ತೊಂದರೆಯೆಂದು ನಮ್ಮ ಮನೆಯಿಂದ ಹೊರಟುಹೋದಳು. ಇದೆಲ್ಲವನ್ನೂ ನಾನು ಊಹಿಸಿ ಹೇಳುವುದೇ ಹೊರತು, ಇದರ ಕಾರಣವನ್ನು ನಾನು ಆರನ್ನೂ ಕೇಳಿದವನಲ್ಲ.

ನಾನು—ಆಕೆಯು ಆರ ಹೆಂಡಿತಿಯೆಂಬುದು ತಮಗೇನಾದರೂ ಗೊತ್ತೇ?

ಶಿವ—ಗೊತ್ತು. ಆಕೆಯು ವಿಶ್ವನಾಥನ ಹೆಂಡಿತಿ.

ನಾನು—ಹಾಗೆಯೇ! ವಿಶ್ವನಾಥನಿಗೆ ಬೇಕಾದ ಹಾಗೆ ಆಸ್ತಿಪಾಸ್ತಿಗಳು ಇದ್ದುವೆಂದು ನಾನು ಕೇಳಿರುವೆನು. ಅಂತಹವನ ಹೆಂಡಿತಿಗೆ ಇಂತಹ ದುರ್ದಶೆಗೆ ಕಾರಣವೇನು?

ಶಿವ—ವಿಶ್ವನಾಥನಿಗೆ ಲೇಣೆಗಿಂತಲೂ ದೇಣೆ ಹೆಚ್ಚಾಗಿದ್ದಿತೆಂದು ನಾನು ನಮ್ಮ ಮಾವನ ಬಾಯಿಂದಲೇ ಕೇಳಿರುವೆನು.

ನಾನು—ವಿಶ್ವನಾಥನಿಗೆ ದೇಣೆ ಇದ್ದುದರಿಂದಲ್ಲವೇ ಆತನ ಹೆಂಡಿತಿಗೆ ಕಂಡವರ ಮನೆಯಲ್ಲಿ ಅಡುಗೆ ಮಾಡುವ ಯೋಗವು ಲಭಿಸಿತು?

ಶಿವ—ಆಕೆಯನ್ನು ಕಷ್ಟದಿಂದ ಉದ್ಧಾರಮಾಡುವುದಕ್ಕಾಗಿ ನಮ್ಮ ಮಾವನು ಎಷ್ಟೋ ಶ್ರಮಪಟ್ಟರಂತೆ. ಅವುದರಿಂದಲೂ ಏನೂ ಪ್ರಯೋಜನವಾಗಲಿಲ್ಲವಂತೆ.

ನಾನು—ಮತ್ತೇನು ವಿಷಯ?

ಶಿವ—ಮತ್ತೊಂದು ಸಂಗತಿ ಕೇಳಿದ್ದೆನು. ವಿಶ್ವನಾಥನು ಸಾಯುವ ಕಾಲದಲ್ಲಿ, ಆಕೆಯು ಕೆಲವು ಪತ್ರಗಳನ್ನು ಕದ್ದು ಮುಚ್ಚಿಟ್ಟುಕೊಂಡಿದ್ದಳಂತೆ. ಅದು ನಮ್ಮ ಮಾವುನಿಗೆ ಗೊತ್ತಾಗಿ ಆ ಪತ್ರಗಳೆಲ್ಲವನ್ನೂ ತಂದು ಕೊಡುವು ದಾದರೆ ಸರಳಕುಮಾರಿಗೆ ಸಾಧ್ಯವಾದಷ್ಟು ಜೀವನಕ್ಕೆ ಅನುಕೂಲಪಡಿಸಿ ಕೊಡುವು ದಾಗಿ ಆಕೆಗೆ ಹೇಳಿ ಕಳುಹಿಸಿದ್ದರಂತೆ. ಅದರ ಮುಂದೆ ಏನಾಯಿತೋ ಅದು ನನಗೆ ತಿಳಿಯದು.

ನಾನು—ಶಿವಕುಮಾರನೊಡನೆ ಈರೀತಿಯಾಗಿ ಮಾತುಗಳನ್ನಾಡಿ ಮನೆಗೆ ಹಿಂತಿರುಗಿ ಬಂದುಬಿಟ್ಟೆನು.

---

## ಮೂರನೆಯ ಅಧ್ಯಾಯ

ಮರುದಿನ ಮೊದಲ್ಗೊಂಡು ನಾನು ಪತ್ತೆಯ ಕೆಲಸಕ್ಕೆ ಪ್ರಾರಂಭಮಾಡಿ ದೆನು. ಒಂದು ದಿನ ಒಂದು ರಾತ್ರಿಯೆನ್ನುವುದರೊಳಗಾಗಿ ನಾನು ಎಷ್ಟುಬಗೆ ಯಾಗಿ ವೇಷವನ್ನು ಬದಲಾಯಿಸಿದೆನು! ಒಂದೊಂದು ವೇಳೆ ಕೂಲಿಯವನಂತೆ ಯೂ, ಒಂದೊಂದು ವೇಳೆ ಸಾಹುಕಾರನಂತೆಯೂ, ಒಂದೊಂದು ವೇಳೆ ದೊಡ್ಡ ಮನುಷ್ಯನಂತೆಯೂ, ಒಂದೊಂದು ವೇಳೆ ಭಿಕ್ಷುಕನಂತೆಯೂ, ಒಂದೊಂದು ವೇಳೆ ಸರ್ಕಾರದ ದೊಡ್ಡ ಹುದ್ದೇದಾರನಂತೆಯೂ ಒಂದೊಂದು ವೇಳೆ ಅಹನ್ಯಹನಿ ಕಾಲ ಕ್ಷೇಪಮಾಡುವ ಸಣ್ಣ ನೌಕರನಂತೆಯೂ, ಒಂದೊಂದು ವೇಳೆ ಹೆಂಗುಸಿನಂತೆಯೂ ಒಂದೊಂದು ವೇಳೆ ಗಂಡಸಿನಂತೆಯೂ ವೇಷವನ್ನು ಧಾರಣಮಾಡಿ ಎಷ್ಟೋ ಜನರ ಹಿಂದೆ ತಿರುಗಾಡಿದೆನು. ಇದೆಲ್ಲವನ್ನೂ ಕೈಕೊಂಡ ಕೈಕಾರ್ಯವನ್ನು ನಿರ್ವಹಿಸುವುದರ ಮೂಲಕ ಈ ಹಾಳು ಹೊಟ್ಟೆಯನ್ನು ಹೊರೆದುಕೊಳ್ಳುವುದಕ್ಕಾಗಿ ಮನುಷ್ಯಮಾತ್ರ ದವನು ಮಾಡಿಯೇ ತೀರಬೇಕು. ಪ್ರಪಂಚವು ನನಗೆ ಬೇಡವೆನ್ನುವವರ ಮಾತು ಹಾಗಿರಲಿ, ಲೋಕದಲ್ಲಿ ಎಲ್ಲರಂತೆ ಬಾಳಬೇಕೆನ್ನುವವರು, ಹತ್ತು ವಿಧವಾದ ವೇಷ ಗಳನ್ನು ಹಾಕಿ ಹತ್ತು ದಾರಿಗಳಲ್ಲಿ ನಡೆದು ಹತ್ತು ಬಗೆಯಾದ ಮಾತುಗಳನ್ನಾಡಿ ದರೂ, ಹೊತ್ತಿಗೆ ಮುಂಚೆ ಒಂದು ತುತ್ತಿಗೆ ಕೂಡ ಅಭಾವವಾಗುವ ಕಾಲ ಬಂದಿದೆ. ಕಲಿಗಾಲ ! ನಿನ್ನ ಮಹಿಮೆಯನ್ನು ಅರಿತವರಾರು ?

ಒಂದು ದಿನ ಸಂಧ್ಯಾಕಾಲ ; ನಾನು ಒಬ್ಬ ಬಲು ದೊಡ್ಡಮನುಷ್ಯನಂತೆ ವೇಷವನ್ನು ತಾಳಿ ವಾಯುಸೇವನೆಗೋಸ್ಕರ ಊರಿಗೆ ಸೇರಿದ ಹಾಗಿದ್ದ ಹೂದೋಟ ದೊಳಗೆ ಪ್ರವೇಶಮಾಡಿದೆನು. ನನ್ನ ಮುಂದುಗಡೆ ಒಬ್ಬ ಮನುಷ್ಯನು ಈಕಡೆ ಆಕಡೆ ನೋಡುತ್ತಾ ಆರನ್ನೋ ಹುಡುಕುವನಂತೆ ಹೋಗುತ್ತಿದ್ದನು.

ಆ ಮನುಷ್ಯನು ನೋಡುವುದಕ್ಕೆ ಬಹಳ ಸುಂದರನು. ಈಗಿನ ಕಾಲದ ನವೀನ ಯುವಕನಂತೆ ಬೆಡಗಿನಿಂದ ಕೂಡಿ ಇತರರನ್ನು ತುಚ್ಛವಾಗಿ ಎಣಿಸುವ ನೋಟವುಳ್ಳವನಾಗಿ ಆ ಮನುಷ್ಯನು ಸಂಚರಿಸಲಾರಂಭಿಸಿದನು. ಆತನು ಕೆಲವು ವೇಳೆ ಮೆಲ್ಲಗೂ ಕೆಲವು ವೇಳೆ ವೇಗವಾಗಿಯೂ ನಡೆಯುತ್ತಿದ್ದುದನ್ನು ನೋಡಿ ನನಗೆ ಸಂಶಯವುಂಟಾಯಿತು. ಆ ಸಮಯಕ್ಕೆ ಸರಿಯಾಗಿ ಮತ್ತೊಂದು ಕಡೆ ಯಿಂದ ದಾಸಿಯ ವೇಷವನ್ನು ಧರಿಸಿದ ಮುದುಕಿಯೊಬ್ಬಳು ಬರುತ್ತಾ ಆ ಮನುಷ್ಯನನ್ನು ನೋಡಿ ಮುಗುಳು ನಗೆಯನ್ನು ನಕ್ಕಳು.

ಆತನು—ರಾಯರನ್ನು ನೋಡಿದ್ದೆಯಾ ?

ಆಕೆಯು—ಇಲ್ಲ; ಅದೇಕೆ ?

ಆತನು—ಅಲ್ಲಿ ನೋಡು. ಅವರೇನಾದರೂ ಬರುತ್ತಿರುವರೊ ? ಅವರು ಬಂದ ಒಡನೆ ನಾನು ಬಂದಿರುವುದನ್ನು ತಿಳಿಸು.

ಹೀಗೆ ಹೇಳಿ ನವಯುವಕನು ಮುಂದೆ ತೆರಳಿದನು. ವೃದ್ಧೆಯೂ ಹೊರಟು ಹೋದಳು.

ಯುವಕನೂ ಹೊರಟನು, ನಾನೂ ಹೊರಟೆನು. ಆತನ ನಡೆಗೆಯನ್ನು ನೋಡಿ ನೋಡಿ ನನ್ನ ಸಂದೇಹವು ಇಮ್ಮಡಿಯಾಗುತ ಬಂದಿತು. ಧ್ವನಿಯು ಕೇಳುವುದಕ್ಕೆ ಬಹಳ ಇಂಪು, ನೋಡಿದರೆ ಹದಿನಾರು ವರ್ಷವಾಗಿರುವಂತೆ ಕಂಡು ಬರುವ ಸುಲಲಿತವಾದ ಶರೀರ. ಇದನ್ನು ನೋಡಿದ ಕೂಡಲೆ ಆ ವ್ಯಕ್ತಿಯು ಯುವಕನೋ, ಇಲ್ಲವೇ ಯುವತಿಯೋ ಎಂದು ಸಂದೇಹಕ್ಕಿಟ್ಟಿತು.

ವ್ಯಕ್ತಿಯು ಸ್ವಲ್ಪ ದೂರ ಹೋಗಿ ಒಂದು ಗಿಡದ ಕೆಳಗೆ ಹಾಕಿದ್ದ ಬೆಂಚಿನ ಮೇಲೆ ಕುಳಿತುಕೊಂಡಿತು. ನಾನು ಕಣ್ಮರೆಯಾಗಿದ್ದುಕೊಂಡು, ಆ ವ್ಯಕ್ತಿಯ ಕಡೆ ದೃಷ್ಟಿಯಿಟ್ಟುಕೊಂಡಿದ್ದೆನು. ಹೀಗಿರುತ್ತಿರುವಷ್ಟರಲ್ಲಿಯೇ ಸೂರ್ಯನು ಪೂರ್ತಿಯಾಗಿ ಮುಳುಗಿ ಹೋಗಿ ಅಂಧಕಾರವು ಜಗವೆಲ್ಲವನ್ನೂ ಆವರಿಸಲಾರಂಭಿಸಿತು. ಆ ಸಮಯದಲ್ಲಿ ಒಬ್ಬ ಮನುಷ್ಯನು ಅಲ್ಲಿಗೆ ಬಂದು—ಲಲಿತ, ನಾನು ಬಂದುದು ಕೊಂಚ ಹೊತ್ತಾಯಿತಲ್ಲವೇ ?

ಲಲಿತ—ಕೊಂಚವೇನು ! ಬಹಳ ಹೊತ್ತಾಯಿತು.

ಆಗಂತುಕ—ಹಾಗಾದರೆ ನೀನು ಬಂದು ಎಷ್ಟು ಹೊತ್ತಾಗಿರಬಹುದು ?

ಲಲಿತ—ನಾನು ಬಂದು ಎರಡು, ಮೂರು ಗಂಟೆಯ ಹೊತ್ತಾದರೂ ಆಗಿರಬಹುದು.

ಆಗಂತುಕ—ಹೋಗು, ಹೋಗು, ಸುಳ್ಳು ಏತಕೆ ಆಡುವೆ? ನೀನು ಬಂದು ಹತ್ತಾರು ನಿಮಿಷಗಳಾಗಿರಬೇಕು.

ಲಲಿತ—ಹತ್ತಾರು ನಿಮಿಷಗಳಾದರೇನು? ಹತ್ತಾರು ಘಂಟೆಗಳೇ ಆದರೇನು? ಆದುದು ಆಗಿಯೇ ಹೋಯಿತು.

ಆಗಂತುಕ—ನಾವು ಇಲ್ಲಿ ಏತಕೆ ಇರಬೇಕು? ಹೊರಡೋಣ ನಡೆ.

ಲಲಿತ—ಹೋಗುವುದೆಲ್ಲಿಗೆ? ನಾನು ಈಗ ಮನೆಗೆ ಬರುವುದಿಲ್ಲ.

ಆಗಂತುಕ—ಹಾಗಾದರೆ ನೀನು ಎಲ್ಲಿಗೆ ಹೋಗುವೆ?

ಲಲಿತ—ನಾಟಕ ನೋಡುವುದಕ್ಕೆ.

ಆಗುಂತಕ—ಅದಕ್ಕೆ ಈ ವೇಷ ಸರಿಹೋಗುವುದಿಲ್ಲ.

ಲಲಿತ—ಸರಿಹೋಗುವುದಿಲ್ಲವೆಂದರೇನು? ನಾನು ಈ ವೇಷದಲ್ಲಿದ್ದರೆ ನನ್ನನ್ನು ಆರಾದರೂ ಕದ್ದುಕೊಂಡು ಹೋಗುವರೊ?

ಆಗಂತುಕ—ಕದ್ದುಕೊಂಡು ಹೋಗುವ ಮಾತು ಹಾಗಿರಲಿ, ಹೆಂಗುಸು ಗಂಡಸಿನ ವೇಷದಿಂದಲಾಗಲಿ, ಗಂಡಸು ಹೆಂಗುಸಿನ ವೇಷದಿಂದಲಾಗಲಿ ಬೀದಿ ಬೀದಿಗಳಲ್ಲಿ ಸಂಚರಿಸುವುದಾದರೆ, ಯಾಮಿಕರು ಹಿಡಿದುಕೊಂಡು ಹೋಗಿ ಇಲ್ಲದ ಯಾತನೆಗೆ ಗುರಿಮಾಡುವರು.

ಲಲಿತ—ನಾನು ಹಳ್ಳಿಯಿಂದ ಬಂದಿಲ್ಲ, ನನಗೂ ಕಾಲ ದೇಶ ವರ್ತಮಾನಗಳುಂಟು. ಇಷ್ಟಕ್ಕೆಲ್ಲಾ ಹೆದರುವುದಾದರೆ ನಾವು ಬದುಕಿದಂತೆಯೇ. ಆ ಮಾತು ಹಾಗಿರಲಿ, ನಾನು ನಾಟಕ ನೋಡುವುದಕ್ಕೆ ಹೋಗಬೇಕು.

ಆಗಂತುಕ—ನಾಟಕಕ್ಕೆ ಹೋಗುವುದಕ್ಕೆ ಬಹಳ ಹೊತ್ತಿದೆ. ಈಗ ಮನೆಗೆ ಹೋಗೋಣ ನಡೆ, ಅಲ್ಲಿಗೆ ಹೋದ ಮೇಲೆ ಮುಂದಿನ ಆಲೋಚನೆ.

ಲಲಿತ—ಹಾಗೆಯೇ ಆಗಲಿ.

ಅವರಿಬ್ಬರೂ ಪರಸ್ಪರ ಕುತ್ತಿಗೆಯ ಮೇಲೆ ಕೈಹಾಕಿಕೊಂಡು ಮುಂದೆ ಸಾಗಿದರು. ನನಗೆ ಮಾತ್ರ ಕಷ್ಟಕ್ಕೆ ಬಂದಿತು. ನಾನು ಅವರ ಹಿಂದೆಯೇ ಅನುಸರಿಸಿಕೊಂಡು ಹೋಗುವುದಾದರೆ, ಅವರು ಒಂದು ವೇಳೆ ನನ್ನನ್ನು ನೋಡಬಹುದು, ಸಂದೇಹಪಡಲೂಬಹುದು, ಆದರಿಂದ ಕಾರ್ಯಹಾನಿಯಾಗುವುದು ನಿಜವೆಂದು ತಿಳಿದು ಅವರು ತೋಟವನ್ನು ಬಿಟ್ಟು ದಾರಿಗೆ ಸೇರುವ ವರೆಗೂ ನಾನು ಅವರನ್ನು ಹಿಂಬಾಲಿಸಲು ಸಾಹಸವುಳ್ಳವನಾಗಲಿಲ್ಲ.

ಲಲಿತ ಮತ್ತು ಆಗಂತುಕ ಅವರಿಬ್ಬರೂ ಹೂದೋಟದಿಂದ ಪಾರಾಗಿ ದಾರಿಯನ್ನು ಸೇರಿ ಒಬ್ಬರ ಕೈಯನ್ನು ಒಬ್ಬರು ಹಿಡಿದುಕೊಂಡು ಉತ್ತರದಿಕ್ಕಿನ ಕಡೆ ತೆರಳಿದರು. ಆಗ ಬಹಳ ಕತ್ತಲೆಯಾಗಿದ್ದಿತು. ದಾರಿಯಲ್ಲಿ ಅಲ್ಲೊಂದು ಇಲ್ಲೊಂದು ದೀಪವು ಮಿಣ ಮಿಣನೆ ಉರಿಯುತ್ತಿದ್ದಿತು.

ದಾರಿಯಲ್ಲಿ ಹೋಗುತ್ತಿರುವಾಗ ಲಲಿತನು ಉಯಿಲಿನ ವಿಷಯವೇನಾಯಿತು, ಎಂದು ಕೇಳಲು,

ಅದಕ್ಕೆ ಉತ್ತರವಾಗಿ ಆಗಂತುಕನು, ಈಗ ಬಹಳ ಕಷ್ಟಕ್ಕಿಟ್ಟಿರುವುದು. ಅದರ ಆಲೋಚನೆಯನ್ನು ಮಾಡುವುದಕ್ಕೆ ಅವಕಾಶ ದೊರೆತಿಲ್ಲವೆಂದನು.

ಲಲಿತ—ನಿನ್ನ ವಿಷಯದಲ್ಲಿ ಆರಿಗೂ ಸಂದೇಹತೋರಲಿಲ್ಲವಷ್ಟೇ ?

ಆಗಂತುಕ—ಇಲ್ಲ. ಆ ದಿನ ಪತ್ತೇದಾರನಾದ ಧೀರೇಂದ್ರನು ಆ ಮನೆಗೆ ಹೋಗಿದ್ದನು. ಈ ಕಾರ್ಯದ ಭಾರವನ್ನು ಆತನೇ ವಹಿಸಿಕೊಂಡಿರುವಂತೆ ತೋರುತ್ತದೆ.

ಲಲಿತ—ಆದರಿಂದ ನಿನಗೆ ನಷ್ಟವೇನು ? ಅದನ್ನು ಕೆಲವು ದಿನದ ಮಟ್ಟಿಗೆ ಬೇರೆ ಸ್ಥಳಕ್ಕೆ ಸಾಗಿಸಿದರಾಯಿತು.

ಆಗಂತುಕ—ನಿಜ, ನಿಜ ; ಹಾಗಾದರೆ ನೀನು ಅದನ್ನು ತೆಗೆದುಕೊಂಡು ಹರಿಪುರಕ್ಕೆ ಹೋಗು. ಅಲ್ಲಿ ಕೆಲವು ಕಾಲವಿದ್ದು ಇಲ್ಲಿಗೆ ಬರಬಹುದು.

ಲಲಿತ—ಹರಿಪುರದಲ್ಲಿ ಆರಿರುವರು ?

ಆಗಂತುಕ—ಗೊತ್ತಿಲ್ಲವೇ ? ನಮ್ಮ ಪರಮ ಸ್ನೇಹಿತನಾದ ದುರ್ಗಾದಾಸನು ಅಲ್ಲಿಯೇ ಇರುವನು.

ಲಲಿತ—ದುರ್ಗಾದಾಸನನ್ನು ನಾನು ನಿನ್ನೆಯ ದಿನ ಇಲ್ಲಿ ನೋಡಿದ್ದೆನು.

ಆಗಂತುಕ—ಅಹುದು ನಾನೂ ನೋಡಿದ್ದೆನು. ಅಲ್ಲಿ ಅವನ ಹೆಂಡಿತಿಯ ತಮ್ಮ ಹರಿಯನ್ನು ಬಿಟ್ಟು ಬಂದಿರುವನು.

ಅವರಿಬ್ಬರೂ ಈ ರೀತಿಯಲ್ಲಿ ಮಾತನಾಡಿಕೊಳ್ಳುತ್ತಾ ಒಂದು ಅಯೋಗ್ಯವಾದ ಗಲ್ಲಿಯೊಳಗೆ ಪ್ರವೇಶಮಾಡಿದರು. ನಾವು ಅನೇಕ ಸಂಕಟಕ್ಕೆ ಒಳಗಾಗಿ ಗಲ್ಲಿಯ ಹೆಸರನ್ನು ಮಾತ್ರ ನಮ್ಮ ಪ್ರಿಯ ಪಾಠಕರಿಗೆ ತಿಳಿಸಲಾಗುವುದಿಲ್ಲ. ಆವಾಗಲೂ ಸಣ್ಣ ಸಣ್ಣ ಗಲ್ಲಿಗಳಲ್ಲೇ ಸಂಚಾರಮಾಡತಕ್ಕವರಿಗೆ ನಾನು

ಆ ಗಲ್ಲಿಯ ಹೆಸರು ಹೇಳಬೇಕಾದುದಿಲ್ಲ. ಏಕೆಂದರೆ, ಅದು ಅವರಿಗೆ ಗೊತ್ತೇ ಇರುತ್ತದೆ. ಹಾಗೆ ಸಂಚಾರ ಮಾಡದೆ ಇರತಕ್ಕವರಿಗೆ ಹೆಸರು ಹೇಳಿದರೂ ಪ್ರಯೋಜನವಿರುವುದಿಲ್ಲ, ಅಂತಹವರು ತಿಳಿಯದೇ ಇದ್ದರೂ ನಷ್ಟವಿಲ್ಲ.

---

## ನಾಲ್ಕನೆಯ ಅಧ್ಯಾಯ

ಲಲಿತನೊಡನೆ ಆಗಂತುಕನೂ ಗಲ್ಲಿಯೊಳಗೆ ಪ್ರವೇಶಮಾಡಿದನು. ಇಬ್ಬರೂ ಆವ ಮಾತನ್ನೂ ಆಡದೆ ಕೊಂಚ ದೂರ ದಾರಿಯನ್ನು ಸಾಗಿಸಿದರು. ಅಷ್ಟು ಹೊತ್ತಿಗೆ ಇದಿರಿನಿಂದ ಮತ್ತೊಬ್ಬ ಮನುಷ್ಯನು ಬಂದು, ಚಂದ್ರಶೇಖರ, ತಮ್ಮನ್ನು ಹುಡುಕಿಕೊಂಡೇ ನಾನು ಲಲಿತನ ಮನೆಗೆ ಹೋಗಿದ್ದೆನು, ಎಂದನು.

ಲಲಿತ—ತ್ರಿಪುರ, ನಿಜವಾಗಿಯೂ ನಮ್ಮ ಮನೆಗೆ ಹೋಗಿದ್ದೆಯಾ?

ತ್ರಿಪುರಾರಿ—ನೀನು ಆವಾಗಲೂ ಹೀಗೆಯೇ, ಆವುದನ್ನೂ ನೀನು ನಂಬುವುದೇ ಇಲ್ಲ. ನೀನು ನಂಬಿದರೆಷ್ಟು ಬಿಟ್ಟರೆ ಎಷ್ಟು? ನಮ್ಮ ಚಂದ್ರಶೇಖರ ಮಹಾರಾಯನಿಗೆ ನನ್ನ ಸ್ವಭಾವವು ಚೆನ್ನಾಗಿಯೂ ಗೊತ್ತು.

ಚಂದ್ರಶೇಖರ— ತ್ರಿಪುರ, ಹರಿ ಹೇಗಿರುವನು?

ತ್ರಿಪುರಾರಿ—ಪ್ರಯೋಜನವಿಲ್ಲ. ಅವನು ಆವಾಗಲೂ ಮಹಾ ಬೆದರು ಗೊಡ್ಡು; ಅವನು ಯಾನಿಕರನ್ನು ಕಂಡರೆ ಅಲ್ಲಿಯೇ ಅಡಗಿಹೋಗುವನು, ಆರಾದರೂ ಹೆಸರು ಹಿಡಿದು ಕೂಗಿದರೆ ಬೆಚ್ಚಿ ಬೀರೇಕಾಯಿಯಾಗುವನು. ನಾನು ಮನೆಗೆ ಆರನ್ನಾದರೂ ಕರೆದುಕೊಂಡು ಹೋದರಂತೂ ಅವನು ಮಣ್ಣಿಗೆ ಮಣ್ಣು ತಿಂದುಬಿಡುವನು.

ಚಂದ್ರ—ಅವನಿನ್ನೂ ಪಕ್ವವಾದ ಅವಸ್ಥೆಗೆ ಬಂದಿಲ್ಲವೆಂದು ಕಾಣುವುದು. ಅವನನ್ನು ಕರೆದುಕೊಂಡು ಹೋಗಿ ಬಹುದೂರದಲ್ಲಿರುವ ಒಂದು ಹಳ್ಳಿಯಲ್ಲಿ ಬಿಟ್ಟು ಬರುವುದು ಒಳ್ಳೆಯದು.

ತ್ರಿಪುರಾರಿ—ಅದು ಹೇಗೆ ಬೇಕಾದರೂ ಆಗಬಹುದು. ಅದನ್ನು ನಾನು ನೋಡಿಕೊಳ್ಳುವೆನು. ನನಗೆ ಈಗ ಕೊಂಚ ಹಣ ಬೇಕಾಗಿತ್ತು.

ಚಂದ್ರ—ಎಷ್ಟು?

ತ್ರಿಪುರಾರಿ—ಪ್ರಕೃತ ೫೦ ರೂಪಾಯಿಗಳಾದರೂ ಬೇಕಾಗುವುದು.

ಚಂದ್ರ—ಅದೇತಕೆ? ಹೇಳು.

ತ್ರಿಪುರಾರಿ—ಉಯಿಲಿಗೆ ಇಬ್ಬರು ಸಾಕ್ಷಿಗಳನ್ನು ಹವಣಿಸಿರುವೆನು. ಅವರ ಬಾಯಿ ಮುಚ್ಚುವುದಕ್ಕಾಗಿಯಾದರೂ ಏನಾದರೂ ಕೊಡಬೇಕು; ಕೊಡದೇ ಹೋದರೆ ಊರು ಹೊಲಗೇರಿಯೊಂದಾಗುವುದು.

ಹೀಗೆ ಮಾತನ್ನಾಡುತ್ತಾ ಎಲ್ಲರೂ ಮುಂದೆ ಮುಂದೆ ತೆರಳಿದರು. ನಾನೂ ಕೂಡ ಅವರ ಹಿಂದೆ ಹಿಂದೆಯೇ ಹೊರಟೆನು.

ಚಂದ್ರ—ಈಗ ನೀನು ಹರಿಪುರಕ್ಕೆ ಹೋಗುವೆಯ?

ತ್ರಿಪುರಾರಿ—ಇಲ್ಲ. ಮೊದಲು ಸಾಕ್ಷಿಗಳಿಗೆ ಒಬ್ಬೊಬ್ಬನಿಗೂ ೨೫ ರೂಪಾಯಿಗಳಂತೆ ಕೊಟ್ಟು ಅವರ ಬಾಯಿ ಮುಚ್ಚಿಸಿ, ಅನಂತರ ನಾನು ಹರಿಪುರಕ್ಕೆ ಹೋಗುವೆನು.

ಚಂದ್ರ—ನಮ್ಮ ಲಲಿತನ ಮನೆಯಲ್ಲಿ ಕೊಂಚ ಹೊತ್ತು ತಂಬಾಕನ್ನು ಸೇವಿಸಿ ಹಣವನ್ನು ತೆಗೆದುಕೊಂಡು ಹೊರಡು.

ತ್ರಿಪುರಾರಿಯು ಚಂದ್ರಶೇಖರನ ಮಾತಿಗೆ ಒಪ್ಪಿ ಅವನ ಹಿಂದೆಯೇ ಹೊರಟನು. ಐದು ನಿಮಿಷವೆನ್ನುವುದರೊಳಗಾಗಿಯೇ ಎಲ್ಲರೂ ಒಂದು ಮನೆಯೊಳಗೆ ಪ್ರವೇಶಮಾಡಿದರು. ನಾನು ಮತ್ತೊಂದು ಮನೆಯ ಜಗಲಿಯ ಮೇಲೆ ಏನೋ ಕೆಲಸವಿದ್ದವನಂತೆ ಕುಳಿತುಕೊಂಡು ಅವರನ್ನೇ ಇದಿರು ನೋಡುತ್ತಿದ್ದೆನು.

ಬಹಳ ಹೊತ್ತಿನ ಮೇಲೆ ತ್ರಿಪುರನು ಹೊರಗೆ ಬಂದು ಗಾಡಿಯೊಂದನ್ನು ಬಾಡಿಗೆಗೆ ತೆಗೆದುಕೊಂಡು ಅದರಲ್ಲಿ ಕುಳಿತು ಹೊರಟನು. ನಾನು ಮತ್ತೊಂದು ಗಾಡಿಯನ್ನು ಬಾಡಿಗೆಗೆ ಮಾತನಾಡಿ, ಗಾಡಿಯವನನ್ನು ಕುರಿತು—ಸಾಹೇಬು, ಮುಂದೆ ಗಾಡಿಯೊಂದು ಹೋಗುತ್ತಿದೆಯಷ್ಟೆ, ಅದಕ್ಕೆ ಹಿಂದೆ ದೂರವಾಗಿಯೇ ಇದ್ದುಕೊಂಡು, ಅದು ಹೋಗತಕ್ಕ ಸ್ಥಳಕ್ಕೇನೆ ಹೊಡೆ. ಆರಿಗೂ ಆವ ವಿಧವಾದ ಸಂಶಯವೂ ಉಂಟಾಗದಂತೆ ನೋಡಿಕೊಳ್ಳಬೇಕು. ನಿನ್ನ ಕೆಲಸವು ನನಗೆ ಸಮರ್ಪಕವಾಗಿ ಕಂಡು ಬಂದರೆ ನಿನಗೆ ೮ ಆಣೆಯ ಇನಾಮನ್ನು ನಾನು ಕೊಡುವೆನು, ಎಂದು ಹೇಳಿ ಗಾಡಿಯಲ್ಲಿ ಕುಳಿತು ಹೊರಟೆನು.

ತ್ರಿಪುರಾರಿಯು ಆವ ಗಾಡಿಯನ್ನು ಮಾಡಿಕೊಂಡು ಮುಂದೆ ಮುಂದೆ ಹೊರಟನೋ, ಆಗಾಡಿಯು ಅಲ್ಲಿ ಬಿದ್ದು ಇಲ್ಲಿ ಬಿದ್ದು ಕೊನೆಗೆ ಊರಾಚೆಯಿರುವ ಕಳ್ಳರ ದಿಣ್ಣೆಗೆ ಹೋಗಿ ನಿಂತಿತು. ತ್ರಿಪುರನು ಕೂಡಲೆ ಗಾಡಿಯಿಂದಿಳಿದು ಅಲ್ಲಿದ್ದ ಒಂದು

ಹೆರಕುಮನೆಯೊಳಗೆ ಪ್ರವೇಶಮಾಡಿದನು. ನನ್ನ ಗಾಡಿಯೂ ಅವರಿಗೆ ಕಾಣದಂತೆ ದೂರವಾಗಿ ನಿಂತಿತು. ಅರ್ಧ ಘಂಟೆಯಾದ ಮೇಲೆ ಮುಂದಿನ ಗಾಡಿಯು ಮುಂದಕ್ಕೆ ತೆರಳಲು ನನ್ನ ಗಾಡಿಯೂ ಅದರ ಹಿಂದೆ ಹಿಂದೆಯೇ ಹೊರಡಲಾರಂಭಿಸಿತು.

ಕೊಂಚ ಹೊತ್ತಿನೊಳಗಾಗಿ ಮುಂದಿನ ಗಾಡಿಯು ಹೊಗೆಬಂಡಿಯ ನಿಲ್ದಾಣಕ್ಕೆ ಹೋಗಿ ನಿಂತಿತು. ಗಾಡಿಯಲ್ಲಿ ಕುಳಿತಿದ್ದ ಮನುಷ್ಯನು ಇಳಿದನು. ಅವನನ್ನು ನೋಡಿದ ಮಾತ್ರದಿಂದಲೇ ನನಗೆ ಪರಮಾಶ್ಚರ್ಯವಾಯಿತು. ಆತನು ತ್ರಿಪುರಾರಿಯಾಗಿರಲಿಲ್ಲ. ತ್ರಿಪುರಾರಿಗೆ ದಾಡಿಮೀಸೆಗಳಿರಲಿಲ್ಲ. ಅವನು ಈ ಮನುಷ್ಯನಷ್ಟು ಉದ್ದವಾಗಿಯೂ ಇರಲಿಲ್ಲ. ಇದನ್ನು ನೋಡಿ ನಾನು ದಿಕ್ಕು ತೋರದವನಾಗಿ ಕ್ಷಣಕಾಲ ಅಲ್ಲಿಯೇ ನಿಂತುಬಿಟ್ಟೆನು. ಅಷ್ಟು ಹೊತ್ತಿಗೆ ನನ್ನ ಮಿತ್ರನಾದ ವೀರೇಂದ್ರನು ಅಲ್ಲಿಗೆ ಬಂದಿದ್ದನು. ನಾನು ಆತನನ್ನು ನೋಡಿ, ವಿಶೇಷವೇನೆಂದೆನು. ಮತ್ತೇನೂ ವಿಶೇಷವಿಲ್ಲವೆಂದು ಆತನು ಉತ್ತರವಿತ್ತನು.

ನಾನು—ದಯೆಯಿಟ್ಟು ಈ ಗಾಡಿಯವನ ಹಿಂದೆ ಹೋಗಿಬರಬೇಕು.

ವೀರೇಂದ್ರ—ಅದೇನು ?

ನಾನು—ಅನೇಕ ವಿಷಯಗಳಿವೆ.

ವೀರೇಂದ್ರ—ಸಂದರ್ಭವೇನು ?

ನಾನು—ಇವನ ಮೇಲೆ ನನಗೆ ಸಂಶಯವಿರುವುದು. ಇವರು ದರೋಡೆಗಳ್ಳರು ಮಾತ್ರವೇ ಅಲ್ಲದೆ ಕೊಲೆಪಾತಕರೂ ಅಹುದು. ಇವರ ಕೃತ್ಯವು ಬಲು ಭಯಂಕರವಾಗಿರುವುದು.

ವೀರೇಂದ್ರ—ನೀನು ಏತಕೆ ಹೋಗಬಾರದು ?

ನಾನು—ನನಗೆ ಮತ್ತೊಂದು ಕಡೆ ತಲೆ ಹೋಗುವ ಕೆಲಸವಿರುವುದು. ಅಲ್ಲಿಗೆ ನಾನು ಈಗಲೇ ಹೋಗದೆ ಹೋದರೆ ಕೆಲಸವೆಲ್ಲವೂ ಕೆಟ್ಟು ಹಾಳಾಗಿ ಹೋಗುವುದು. ನಾನು ಈಗ ನರಬಲಿಯ ಪತ್ತೆಯಲ್ಲಿ ನಿಯಮಿಸಲ್ಪಟ್ಟಿರುವುದು ನಿನಗೆ ತಿಳಿದೇ ಇದೆಯಷ್ಟೆ ? ಮುಂದೆ ನಾನು ನಿನಗೆ ಹೇಳಬೇಕಾದದ್ದು ಏನಿದೆ ?

ವೀರೇಂದ್ರನು ನನ್ನ ಸ್ವಭಾವವನ್ನು ಚೆನ್ನಾಗಿಯೂ ಬಲ್ಲನು. ನಾನು ಕೆಲಸಕ್ಕೆ ಬಾರದ ಕೆಲಸದಲ್ಲಿ ಕೈಹಾಕುವುದಿಲ್ಲವೆಂಬುದನ್ನು ಆತನಿಗೆ ಬಲವಾದ ನಂಬುಗೆಯಿದ್ದಿತಾದಕಾರಣ, ಆತನು ಮಾತುಗಳಿಂದ ಕಾಲವನ್ನು ಕಳೆಯದೆ

ಗಾಡಿಯುವನ ಹಿಂದೆಯೇ ಹೊರಟು ಹೋದನು. ನಾನು ಮತ್ತೊಂದು ಗಾಡಿಯನ್ನು ಬಾಡಿಗೆಗೆ ತೆಗೆದು ಕಳ್ಳರ ದಿಣ್ಣೆಗೆ ಹಿಂದಿರುಗಿ ಬಂದೆನು. ಅಲ್ಲಿ ದೈವಯೋಗದಿಂದ ತ್ರಿಪುರಾರಿಯು ಎರಡು ಕೈಗಳಲ್ಲಿಯೂ ಪಾತ್ರೆಗಳನ್ನು ಹಿಡಿದುಕೊಂಡು ಹೆಂಡದಂಗಡಿಯಿಂದ ಹಿಂದಿರುಗಿ ಬರುತಿದ್ದನು. ನಾನು ಆ ಕೂಡಲೆ ನನ್ನ ವೇಷವನ್ನು ಮಾರ್ಪಡಿಸಿಕೊಂಡು ಅವನ ಇದಿರಿಗೆ ನಾನು ಊಗಲಾಡುತ್ತಾ ಬಂದು ನಿಂತೆನು. ತ್ರಿಪುರಾರಿಯು ಕಂಠಪೂರ್ತಿಯಾಗಿ ಮದ್ಯವನ್ನು ಸೇವಿಸಿದ್ದನು. ಆದರೆ ಅವನು ಇನ್ನೂ ಊಗಲಾಡುವುದಕ್ಕೆ ಪ್ರಾರಂಭಿಸಿರಲಿಲ್ಲವಾದುದರಿಂದ, ನನ್ನನ್ನು ನೋಡಿ—ಯಾರ್ಲಾ ನೀನು? ಎಂದು ಕೇಳಿದನು.

ನಾನು ಹೆಂಡಕುಡಿದವನಂತೆ ಅತ್ತಿತ್ತ ಊಗಲಾಡುತ್ತಾ-ನೀನಾರ್ಲಾ ನೀನು? ಟ್ರಿಪುರಾ ಅಲ್ಲೇನ್ಲಾ? ಕೈಲಿ ಅದೇನು ತಕ್ಕೊಂಡು ಎಲ್ಲಿಗೆಲಾ ಹೊರಟೆ? ಎಂದು ಕೇಳಿದೆನು.

ಅದನ್ನು ಕೇಳಿ ತ್ರಿಪುರಾರಿಯು ನನ್ನನ್ನು ಚೆನ್ನಾಗಿ ದೃಷ್ಟಿಸಿ ನೋಡಿ—ಓಹೋ! ಎಲೆ ಸಿದ್ದನಲ್ವಾ ನೀನು ಎಂದುಸುರಿದನು.

ನಾನು—ಸಿದ್ನಾ? ಅದೇನು ನಿಂಗೆ ಸಿದ್ನೆಚ್ಚಾ? ನಾನು ಮಾದನಲ್ವಾ.

ತ್ರಿಪುರಾ—ಮಾದ! ಅದಾರ್ಲಾ ಮಾದಾ? ಮಾದಾಗೀದಾ ಯಾರೂ ನಂಗೆ ಗೊತ್ತಿಲ್ವಣ್ಣಾ.

ನಾನು—ನಿಂಗೆ ಹೆಂಗೆ ಗೊತ್ತಪ್ಪ? ಅದಕ್ಕೂ ಕಾಲವಿಲ್ವಾ? ಅದ್ಹಂಗಿರಲಿ ಟ್ರಿಪುರಾ! ನನ್ನ ಹತ್ರ ಇಪ್ಪತ್ತು ರೂಪಾಯಿ ಐತೆ. ಬಾಜಿಕಟ್ಟೋಣ ಬರ್ತೀಯಾ?

ತ್ರಿಪುರಾರಿಗೆ ನನ್ನ ಕೈಯಲ್ಲಿ ೨೦ ರೂಪಾಯಿಗಳ ನೋಟನ್ನು ನೋಡಿ ಬಹಳ ಸಂತೋಷವಾಯಿತು. ಈತನು ನನ್ನನ್ನು ಎಲ್ಲಿಯೋ ನೋಡಿರಬೇಕು, ಇಲ್ಲದಿದ್ದರೆ ನನ್ನ ಹೆಸರು ಹಿಡಿದು ಈತನು ಕೂಗುವುದಕ್ಕೆ ಕಾರಣವೇನು, ಖಂಡಿತವಾಗಿಯೂ ಈತನು ನನ್ನನ್ನು ಬಲ್ಲನು. ನಾನು ಮಾತ್ರ ಈತನನ್ನು ಮರೆತುಬಿಟ್ಟಿರುವೆನು ಎಂದು ತ್ರಿಪುರಾರಿಯು ತಿಳಿದುಕೊಂಡನು. ತ್ರಿಪುರಾರಿಯು ಹಣದ ಆಶೆಯಿಂದಲೋ, ಇಲ್ಲವೇ ಮತ್ತಾವ ಕಾರಣದಿಂದಲೋ ನನ್ನನ್ನು ಕುರಿತು—ಮಾದ, ಬಾ ಹೋಗೋಣ. ನಿನಗೆ ಗುರುತುಕಂಡ ಸೂಳೆಯೊಬ್ಬಳು ಹತ್ರದಾಗೆ ಅವ್ಳೆ. ನಾವು ಅವಳ ಮನೆಗೆ ಹೋಗಿ ಸಂತೋಷವಾಗಿರೋಣ, ಎಂದನು.

ನಾನು—ಟಪ್ರಾ! ಚೆಂದಾಗಿ ಹೇಳ್ದಿ. ಅವಳು ಮೊದಲೇ ಸೂಳೆ. ನಮ್ಮಲ್ಲಿ ಹಣ ಗಿಣ ಕಂಡ್ರೆ ಕದ್ದುಕೊಳ್ತವ್ಳೆ. ನಂಗೆ ಭಯವಾಗ್ತೈತೆ. ನಾನು ಬರೋಕಿಲ್ಲ.

ತ್ರಿಪುರಾ—ಹುಚ್ಚಾ! ಭಯ ಎಲ್ಲೈತೆ, ಬಾ ನನ್ನ ಸಂಗಾತ ನಾನು ಕರಕೊಂಡು ಹೋಗ್ತಿವ್ನಿ.

ನಾನು ಯತ್ನವಿಲ್ಲದೆ ಒಪ್ಪಿಕೊಂಡೆನು. ತ್ರಿಪುರಾರಿಯು ನನ್ನನ್ನು ಸಮೀಪದಲ್ಲಿದ್ದ ಒಂದು ದೊಡ್ಡ ಮಹಡಿಯ ಮನೆಗೆ ಕರೆದುಕೊಂಡು ಹೋದನು. ಸ್ತ್ರೀಪುರುಷ ಪಾಠಕ ಮಹಾಶಯ! ನನ್ನನ್ನು ಕ್ಷಮಿಸಬೇಕು, ನನಗೆ ಇಷ್ಟವಿಲ್ಲದಿದ್ದರೂ ಕಾರ್ಯಸಾಧನೆಗಾಗಿ ಸೂಳೆಯ ಮನೆಗೆ ಹೋಗಿ ಕುಳಿತುಕೊಳ್ಳಬೇಕಾಯಿತು. ಪತ್ತೇದಾರರಾದವರು ಸೂಳೆಯ ಮನೆಗೆ ಹೋಗವುದೊಂದು ಆಶ್ಚರ್ಯವಲ್ಲ, ಕಾರ್ಯಸಾಧನೆಗಾಗಿ ಆರಲ್ಲಾದರೂ ಸೇರಬೇಕು, ಆವ ಕೆಲಸವನ್ನಾದರೂ ಮಾಡಲೇಬೇಕಾಗುವುದು.

ನಾನು ಸೂಳೆಯ ಮನೆಗೆ ಹೋಗಿ ಕುಳಿತುಕೊಂಡೊಡನೆ ತ್ರಿಪುರಾರಿಯು ತನಗೆ ತೋರಿದಂತೆ ನನ್ನ ಪರಿಚಯುವನ್ನು ಕೊಟ್ಟನು. ಅದಕ್ಕೆ ಅವಳು ಬಹಳ ಸಂತೋಷಪಟ್ಟು ಮದ್ಯದ ಸೀಸೆಗಳನ್ನೂ ಬಟ್ಟಲುಗಳನ್ನೂ ಮುಂದೆ ತಂದಿಟ್ಟಳು. ನಾನು ಈಗ ತಾನೇ ಬೇಕಾದಷ್ಟು ಕುಡಿದು ಬಂದಿರುವೆನೆಂದು ಹೇಳಿದೆನು. ಅದಕ್ಕೆ ಅವರು ನನ್ನನ್ನು ಬಹಳವಾಗಿ ಬಲಾತ್ಕಾರ ಮಾಡದೆ ತಾವೇ ಕುಡಿಯಲಾರಂಭಿಸಿದರು. ನನಗೆ ಬೇಕಾಗಿದ್ದುದೂ ಅದೆಯಾಗಿದ್ದಿತು.

ಹದಿನಾರು ವರ್ಷದ ಸೂಳೆಯು ಬೇಕಾದಷ್ಟು ಕುಡಿದು ಸಂಗೀತವನ್ನು ಹಾಡತೊಡಗಿದಳು, ಅಲ್ಲಿದ್ದವರಲ್ಲಿ ಒಬ್ಬನು ಹಂಮಣಿ (Harmonium) ಯನ್ನು ಬಾರಿಸಿದನು? ಮತ್ತೊಬ್ಬನು ತಬಲಾ ಬಾರಿಸಿದನು, ಮಗದೊಬ್ಬನು ತಾಳವನ್ನು ಹಾಕಿದನು, ನಾನು ಮಾತ್ರ ವಾಹವಾ, ಬೇಷ್ ಎಂದು ಆಗಿಂದಾಗ ಹೇಳುತ್ತಿದ್ದೆನು. ತ್ರಿಪುರಾರಿಯು ಅಡಿಗಡಿಗೂ ತಲೆಯುನ್ನು ಅಲ್ಲಾಡಿಸುತಿದ್ದನು.

ಗಡಿಯಾರದಲ್ಲಿ ರಾತ್ರಿ ಎರಡು ಗಂಟೆ ಹೊಡೆಯಿತು. ಅಷ್ಟುಹೊತ್ತಿಗೆ ಆವನೋ ಒಬ್ಬನು ಅಲ್ಲಿಗೆ ಬಂದು ಸೇರಿದನು. ಆತನು ಬಂದ ಕೂಡಲೆ ತ್ರಿಪುರಾರಿಯನ್ನು ನೋಡಿ—ತ್ರಿಪುರ, ನೀನು ಇಲ್ಲಿರುವೆಯಾ? ಎಂದನು.

ತ್ರಿಪುರ—ಗೋಪಾಲ, ಏನಾಗಿದೆ?

ಗೋಪಾಲ—ಎದ್ದು ಬಾ, ಹೇಳುವೆನು.

ತ್ರಿಪುರಾರಿಯು ಎದ್ದು ಹೊರಟನು. ಪ್ರಾಯಿಕವಾಗಿ ಅರ್ಧ ಘಂಟೆ ಯಾದರೂ ಆತನು ಹಿಂದಿರುಗಿ ಬರಲೇ ಇಲ್ಲ. ತ್ರಿಪುರನು ಹೊರಟು ಹೋದ ಕೂಡಲೆ ನನಗೆ ಆಲೋಚನೆಗಿಟ್ಟಿತು. ನಾನೂ ಆ ಕೂಡಲೇ ಎದ್ದು ಹೋದರೆ ಅಲ್ಲಿದ್ದವರೇನಾದರೂ ತಿಳಿದುಕೊಂಡಾರೆಂಬ ಶಂಕೆಯಿಂದ ಬಹಳ ಹೊತ್ತು ಅಲ್ಲಿಯೇ ಕುಳಿತಿದ್ದು ಬಿಟ್ಟೆನು. ಅಲ್ಲಿದ್ದವರೆಲ್ಲರೂ ಕೇವಲ ಸಂತೋಷ ಸಾಗರ ದಲ್ಲಿ ತೇಲಿ ಮುಳುಗುತ್ತಿರುವುದನ್ನು ಕಂಡು ನಾನು ಮೆಲ್ಲಗೆ ಕಾಲಿಗೆ ಬುದ್ಧಿ ಹೇಳಿದೆನು. ನಾನು ಹೊರಗೆ ಹೊರಟು ಬಂದುದನ್ನು ಆರೂ ಗಮನಿಸಲಿಲ್ಲ.

ನಾನು ಹೊರಗೆ ಬಂದು ತ್ರಿಪುರಾರಿಯನ್ನು ಸುತ್ತಲೂ ಹುಡುಕಿ ನೋಡಿ ದೆನು. ತ್ರಿಪುರಾರಿಯು ಎಲ್ಲಿಯೂ ಕಾಣಿಸಲಿಲ್ಲ.

---

## ಐದನೆಯ ಅಧ್ಯಾಯ

### (ವೀರೇಂದ್ರನ ಹೇಳಿಕೆ)

ನಾನೊಬ್ಬ ಪತ್ತೇದಾರನು. ನನ್ನ ಪರಿಚಯವು ಮುಂದೆ ವಿಷ ಮುಹೂರ್ತ ಶೋಣಿತ ತರ್ಪಣ ಮುಂತಾದ ಗ್ರಂಥಗಳಿಂದ ಪಾಠಕರಿಗೆ ಉಂಟಾಗುವುದು. ಪ್ರಕೃತ ಪ್ರಸಿದ್ಧ ಪತ್ತೇದಾರನೆನಿಸಿದ ಧೀರೇಂದ್ರನ ಪರಮ ಮಿತ್ರನೆಂದು ತಿಳಿಸಿ ದರೆ ಸಾಕಾಗಿರುವುದು.

ನಾನು ಧೀರೇಂದ್ರನ ಇಷ್ಟದಂತೆ ಗಾಡಿಯವನ ಹಿಂದೆ ಹೊರಟೆನು. ನಿಲ್ದಾ ಣದಲ್ಲಿ ಟಿಕೆಟ್ಟನ್ನು ತೆಗೆದುಕೊಂಡು ಬಂಡಿಯಲ್ಲಿ ಕುಳಿತೆನು. ಅವನು ಆವ ಊರಿಗೆ ತೆಗೆದುಕೊಂಡನೋ ನಾನೂ ಅದೇ ಊರಿಗೆ ತೆಗೆದುಕೊಂಡು ಆತನಿದ್ದ ಲ್ಲಿಗೇ ಹೋಗಿ ಆತನ ಪಕ್ಕದಲ್ಲಿಯೇ ಕುಳಿತುಕೊಂಡೆನು. ಆತನು ನನ್ನೊಡನೆ ಮಾತನಾಡ ತೊಡಗಿದನು. ನಾನು ಈ ಸುಯೋಗವನ್ನು ಕಳೆದುಕೊಳ್ಳಲು ಇಷ್ಟವುಳ್ಳವನಾಗಲಿಲ್ಲ.

ನಾವಿಬ್ಬರೂ ಪರಿಚಿತರಾದೆವು; ಆದರೆ ನಮ್ಮಿಬ್ಬರಿಗೂ ಬಂಡಿಯ ಪರಿ ಚಯವೇ ಹೊರತು ಸಹಜವಾದ ಪರಿಚಯವಲ್ಲ. ಆತನೊಡನೆ ಮಾತನಾಡಿದುದ ರಲ್ಲಿ ಆತನ ಹೆಸರು ಕಾಳೀಕಿಶೋರನೆಂದು ಗೊತ್ತಾಯಿತು. ಆತನ ವಾಸಸ್ಥಾನವು ಹರಿಪುರ. ನಾನೂ ಹರಿಪುರಕ್ಕೆ ಹೋಗುವೆನೆಂದು ತಿಳಿದು ಕಾಳೀಕಿಶೋರನು ನನ್ನನ್ನು ಆರಲ್ಲಿಗೆ ಹೋಗುವೆಯೆಂದು ಕೇಳಿದನು.

ಆ ಪ್ರಶ್ನೆಗೆ ಉತ್ತರಕೊಡುವುದಕ್ಕೆ ನನಗೇನೂ ತೋರಲಿಲ್ಲ. ನಾನು ಸಿದ್ಧನಾಗಿಯೂ ಇರಲಿಲ್ಲ. ಆತನಿಗೆ ಉತ್ತರಕೊಡದಿದ್ದಲ್ಲಿ ಸಂಶಯ ಉಂಟಾಗು

ವುದೆಂದು ತಿಳಿದು, ನನ್ನ ಕೆಲಸವಾದರೋ ಗುರುತರವಾಗಿರುವುದು. ನಾನು ಮಾಸ ಪುಸ್ತಕವನ್ನು ಅಚ್ಚುಹಾಕಿ ಪ್ರಚಾರ ಪಡಿಸಬೇಕೆಂದಿರುವೆನು. ಅದಕ್ಕಾಗಿ ಹರಿಪುರದಲ್ಲಿರತಕ್ಕ ದೊಡ್ಡಮನುಷ್ಯರನ್ನು ನೋಡಿ ಅವರ ಆಶ್ರಯವನ್ನು ಹೊಂದ ಬೇಕೆಂದೆಣಿಸಿ ನಾನು ಹೊರಟಿರುವೆನು. ಆದುದರಿಂದ ನಾನು ಒಂದು ಸ್ಥಳಕ್ಕೆ ಮಾತ್ರ ಹೋಗಬೇಕೆಂದು ಬಂದವನಲ್ಲ, ಎಂದು ಹೇಳಿದೆನು.

ಕಾಳೀಕಿಶೋರನು ನನ್ನ ಕಲ್ಪಿತವಾದ ಮಾಸಪುಸ್ತಕದ ವಿಷಯವಾಗಿ ನಾನಾ ಬಗೆಯಲ್ಲಿ ಜಿಜ್ಞಾಸೆ ಮಾಡಿದನು. ನಾನಾದರೋ ಸುಳ್ಳಿನ ರಾಶಿರಾಶಿಯನ್ನೇ ಆತನ ಮೇಲೆ ಸುರಿಸಲಾರಂಭಿಸಿದೆನು. ಆತನು ನನ್ನ ಸುಳ್ಳುಗಳ ಪರಂಪರೆ ಗಳನ್ನು ಕೇಳಿ ಕೊನೆಗೆ ಹರಿಪುರದಲ್ಲಿ ತಾವು ಎಲ್ಲಿ ಇಳಿಯುವಿರಿ, ಎಂದು ಕೇಳಿದನು.

ನಾನು—ಇಂತಹ ಕಡೆಯೆಂದು ನಾನು ಇನ್ನೂ ನಿಶ್ಚಯ ಮಾಡಿಲ್ಲ, ನಾನೊಬ್ಬನು ಎಲ್ಲಿದ್ದರೂ ಆಯಿತು.

ಕಾಳೀ—ತಮಗೆ ಆವ ವಿಧವಾದ ತೊಂದರೆಯೂ ಇಲ್ಲದ ಪಕ್ಷದಲ್ಲಿ, ತಾವು ನನ್ನ ಮನೆಯಲ್ಲಿದ್ದು ನಿಮ್ಮ ಕೆಲಸವೇನಿದ್ದರೂ ನೆರವೇರಿಸಿಕೊಳ್ಳಬಹುದು.

ನಾನು ಬಹಳ ಹೊತ್ತು ಆಲೋಚಿಸಿದವನಂತೆ ನಟಿಸಿ—ಆಗಬಹುದು, ಎಂದು ಅರ್ಧ ಸಮ್ಮತಿಯನ್ನು ತೋರ್ಪಡಿಸಿದೆನು. ಅಷ್ಟು ಹೊತ್ತಿಗೆ ನಾವು ಹರಿಪುರವನ್ನು ಸೇರಿದೆವು.

ಕಾಳೀಕಿಶೋರನು ಮೃದು ಮಧುರ ಭಾಷಿಯಾದ ದೊಡ್ಡ ಮನುಷ್ಯನು. "ಇತರರಿಗೆ ಬೇಕುಬೇಕಾದ ಹಾಗೆ ಪತ್ರಗಳನ್ನು ಬರೆದುಕೊಡುವುದೇ ನನ್ನ ಕೆಲಸ. ಅದಕ್ಕಾಗಿ ನಾನು ಬಹಳವಾಗಿ ರಾಮನಗರದಲ್ಲಿಯೇ ವಾಸವಾಗಿರುವುದು. ಇದು ಅಲ್ಲದೆ ಜನಗಳಿಗೆ ವ್ಯವಹಾರ ಮಾಡುವುದಕ್ಕೆ ತಕ್ಕ ಏರ್ಪಾಡು ಮಾಡಿ ಕೊಡುವುದೂ, ವಕೀಲರನ್ನು ಹವಣಿಸಿ ಕೊಡುವುದೂ, ವಕೀಲರಿಗೆ ಕಕ್ಷಿಗಾರರನ್ನು ಹವಣಿಸಿ ಕೊಡುವುದೂ, ಇವಾದಿಯಾದ ಕೆಲಸಗಳಿಂದ ತಿಂಗಳಿಗೆ ಹತ್ತೆಂಟು ರೂಪಾಯಿಗಳನ್ನು ನಾನು ಸಂಪಾದಿಸುತ್ತಿರುವೆನು. ಮನೆ ಮಾರುವುದಕ್ಕಾಗಲಿ, ಕೊಳ್ಳುವುದಕ್ಕಾಗಲಿ ನಾನು ದಳ್ಳಾಳಿ; ಸಾಲ ಕೊಡಿಸುವುದಕ್ಕೂ, ಹರಿಸುವುದಕ್ಕೂ ನಾನು ದಳ್ಳಾಳಿ, ಪದಾರ್ಥಗಳನ್ನು ಕೈಯಿಂದ ಕೈಗೆ ಮಾರ್ಪಡಿಸುವುದರಲ್ಲಿಯೂ ನಾನು ದಳ್ಳಾಳಿ, ಈ ರೀತಿಯಾದ ಬಂಡವಾಳವಿಲ್ಲದ ವ್ಯಾಪಾರದಿಂದ ನಾನು ಸುಖ ವಾಗಿ ಜೀವನ ಮಾಡಿಕೊಂಡಿರುವೆನು," ಎಂದು ಆತನೇ ನನ್ನ ಮುಂದೆ ತಿಳಿಸಿದನು. ಆತನು ಅಪರಿಚಿತರಲ್ಲಿ ಮಾತನಾಡುವ ರೀತಿಯನ್ನು ನೋಡಿ ಆತನು ಕಾಲಕಂಡ ಮನುಷ್ಯನಾಗಿರಬೇಕೆಂದು ನನಗೆ ತೋರಿಬಂದಿತು.

ಆತನು ಬಂಡಿಯಿಂದಿಳಿದು ನನ್ನನ್ನೂ ತನ್ನ ಜತೆಯಲ್ಲಿಯೇ ಮನೆಗೆ ಕರೆದು ಕೊಂಡು ಹೋದನು. ರಾತ್ರಿಯಲ್ಲಿ ನನಗೆ ಸುಖವಾದ ಭೋಜನಮಾಡಿಸಿ, ಮಲ ಗುವುದಕ್ಕೆ ತಕ್ಕ ಏರ್ಪಾಡುಗಳನ್ನು ಮಾಡಿಕೊಟ್ಟನು. ಆತನಿಗೆ ನನ್ನಲ್ಲಿ ಪೂರ್ಣ ವಿಶ್ವಾಸವಿರಬೇಕೆಂದು ತಿಳಿದು ನಾನು ಬಂಡಿಯಲ್ಲಿರುವಾಗಲೇ— ನನಗೆ ಪಿತ್ರಾರ್ಜಿತ ವಾದ ಸ್ವತ್ತು ಬಹಳವಾಗಿರುವುದೆಂದೂ, ಅದನ್ನು ದಾಯಾದರು ಅಪಹರಿಸಿ ಕೊಂಡು ಅನುಭವಿಸುತ್ತಿರುವರೆಂದೂ, ಅವರ ಮೇಲೆ ವ್ಯವಹಾರ ಮಾಡುವುದಕ್ಕೆ ತನ್ನಲ್ಲಿ ಹಣಕ್ಕೆ ಮಾರ್ಗವಿಲ್ಲವೆಂದೂ, ಆರಾದರೂ ಕಾರ್ಯವನ್ನು ಉದ್ಧಾರ ಮಾಡಿ ಕೊಡುವುದಾದರೆ ಅವರಿಗೆ ತನ್ನ ಆಸ್ತಿಯಲ್ಲಿ ನಾಲ್ಕನೆಯ ಒಂದು ಭಾಗವನ್ನು ಕೊಡುವುದಾಗಿಯೂ ಹೇಳಿದ್ದೆನು. ಅದಕ್ಕೆ ಆತನು ಈ ವಿಷಯುವನ್ನು ಸಾವ ಕಾಶವಾಗಿ ಮಾತನಾಡೋಣವೆಂದು ಉತ್ತರ ಕೊಟ್ಟಿದ್ದನು. ಆದುದರಿಂದಲೇ ಕಾಳೀಕಿಶೋರನು ನನ್ನನ್ನು ಮನೆಗೆ ಕರೆದುಕೊಂಡು ಹೋಗಿ ಇಷ್ಟು ಉಪಚಾರ ವನ್ನು ತೋರಿಸಿದನು.

ನಾನು ರಾತ್ರಿಯಲ್ಲಿ ಭೋಜನಾನಂತರ ಮಲಗಿದೆನು. ನಿದ್ರೆಮಾತ್ರ ಬರ ಲಿಲ್ಲ, ಇಲ್ಲದ ಆಲೋಚನೆಗಳೆಲ್ಲವೂ ನನ್ನ ಮನವನ್ನು ಆವರಿಸಿದುವು. ಪ್ರಾಯಿಕ ವಾಗಿ ಒಂದು ಗಂಟೆಯ ಹೊತ್ತಿರಬಹುದು, ಆಗ ಇಬ್ಬರು ಮನುಷ್ಯರು ನನ್ನ ಪಕ್ಕದ ಕೊಟಡಿಯಲ್ಲಿ ಕುಳಿತು ಮಾತನಾಡುತ್ತಿದ್ದಂತೆ ನನಗೆ ಗೋಚರವಾಯಿತು. ನಾನು ಮಲಗಿದ್ದ ಕೊಟಡಿಗೂ ಅವರು ಮಾತನಾಡುತಿದ್ದ ಕೊಟಡಿಗೂ ನಡುವೆ ಮರದ ತಡಿಕೆಯು ಹಾಕಿದ್ದುದರಿಂದ ಅವರಾಡುವ ಮಾತು ನಾನಿದ್ದಲ್ಲಿಯೇ ಚೆನ್ನಾಗಿ ಕೇಳಿಸುತ್ತಿದ್ದತು. ನಾನು ಧ್ವನಿಯಿಂದ, ಮಾತನಾಡುತಿದ್ದವರಲ್ಲಿ ಒಬ್ಬನು ಕಾಳೀಕಿಶೋರನೆಂದೂ ಮತ್ತೊಬ್ಬನು ಪಶ್ಚಿಮ ದೇಶದವನೆಂದೂ ಗೊತ್ತಾಯಿತು. ಅವರಿಬ್ಬರೂ ಮಾತನಾಡಿದರು.

ಕಾಳೀ—ಹರಿ, ನೋಡಿದರೆ ಆವುದೂ ಸರಿಯಾಗಿ ಕಾಣುವುದಿಲ್ಲ. ನಾಳೆಯ ದಿನ ನಿನ್ನನ್ನು ಬೇರೆಯ ಸ್ಥಳಕ್ಕೆ ಕರೆದುಕೊಂಡು ಹೋಗಿ ಬಿಡುವುದ ರಲ್ಲಿದ್ದಾರೆ.

ಹರಿ—ನಾನು ಎಲ್ಲಿಗೆ ಹೋಗಬೇಕು ?

ಕಾಳೀ—ನೀನು ಕೊನೆಯ ಪಕ್ಷ ನಾಲ್ಕಾರು ದಿವಸವಾದರೂ ತಲೆ ಯನ್ನು ತಪ್ಪಿಸಿಕೊಂಡಿರು. ಆಮೇಲೆ ಮುಂದೆ ಮಾಡಬೇಕಾದ ಕೆಲಸವನ್ನು ತಿಳಿಸುವೆನು.

ಹರಿ—ನಾನು ಬೇರೆ ಹೋಗಬೇಕೆಂದು ಚಂದ್ರಶೇಖರನು ಹೇಳಿದನೇ ?

ಕಾಳೀ—ಈ ದಿನ ಸಂಜೆಯಲ್ಲಿ ನಾನು ಆತನನ್ನು ನೋಡಿದ್ದೆನು. ಆತನು ಹೇಳಿದುದೇನೆಂದರೆ—ಧೀರೇಂದ್ರನು ಈ ಕೆಲಸದಲ್ಲಿ ಕೈ ಹಾಕಿರುವನು. ಅವನು ಸಾಧಾರಣಕ್ಕೆ ಬಿಡತಕ್ಕವನಲ್ಲ. ಅವನಿಗೆ ಆರಾರಲ್ಲಿ ಸಂದೇಹ ತೋರುವುದೋ ಅವರ ಹಿಂದೆಲ್ಲಾ ಪಹರೆಯಿಟ್ಟಿರುವನು. ಮುಂದಿನ ಪರಿಣಾಮವು ಸುಖಮುಖವಾಗಿ ಕಂಡು ಬರುವುದಿಲ್ಲ.

ಹರಿ—ಇದೆಲ್ಲವೂ ಮನಸ್ಸಿನ ಆಶಂಕೆ. ಇದರಿಂದ ಆತಂಕವೇ ಹೊರತು ಮತ್ತು ಬೇರೆ ಏನೂ ಇಲ್ಲ.

ಕಾಳೀ—ನೀನೇ ನೋಡು, ಹರಿ! ಅದು ಹಾಗಿರಲಿ, ಆ ದಿನ ಮತ್ತೊಂದು ಕೊಲೆ ನಡೆಯಿತಲ್ಲ, ಅದನ್ನು ಮಾಡಿದವರಾರು ಬಲ್ಲೆಯಾ?

ಹರಿ—ನನಗೆ ತಿಳಿಯದು, ಅದನ್ನು ಮಾಡಿದವರಾರು?

ಕಾಳೀ—ಈ ಗ್ರಾಮದಲ್ಲಿಯೇ ಗುರುದಾಸನೆಂದು ಒಬ್ಬ ಮನುಷ್ಯನಿರುವನು. ಆತನ ಹೆಂಡಿತಿಯೊಡನೆ ಚಂದ್ರಶೇಖರನಿಗೆ ಸರಸ ಸಲ್ಲಾಪಗಳುಂಟು. ಗುರುದಾಸನಿಗೆ ಹೆಂಡಿತಿಯ ವಿಷಯದಲ್ಲಿ ಸಂಶಯ ತೋರಿಬಂದು, ಅದನ್ನು ಪರೀಕ್ಷಿಸಿ ನೋಡಬೇಕೆಂದು ಕಾಲವನ್ನು ನಿರೀಕ್ಷಿಸುತ್ತಿದ್ದರೂ ಗೊತ್ತಾಗಲಿಲ್ಲ. ಆತನ ಹೆಂಡಿತಿಯು ಚಂದ್ರಶೇಖರನೊಬ್ಬನನ್ನೇ ಪ್ರೀತಿಸುವಳೆಂದು ಮಾತ್ರ ತಿಳಿಯಬೇಡ. ಅನೇಕರು ಆಕೆಯನ್ನು ಪ್ರೀತಿಸುತ್ತಿರುವರು. ಇದನ್ನು ತಿಳಿದು ಚಂದ್ರಶೇಖರನು ಆಕೆಯನ್ನು ಪ್ರೀತಿಸುವುದನ್ನು ಬಿಟ್ಟುಬಿಟ್ಟನು. ಆವ ರಾತ್ರಿ ನೀನು ಮಧುಸೂದನನನ್ನು ಇತಿಶ್ರೀ ಮಾಡಿದೆಯೋ, ಆ ರಾತ್ರಿಯಲ್ಲಿಯೇ ಗುರುದಾಸನು ತನ್ನ ಹೆಂಡಿತಿಯು ಪರಪುರುಷನೊಡನೆ ಸೇರಿದ್ದುದನ್ನು ಕಂಡು ಸಹಿಸಲಾರದೆ ಆಕೆಯನ್ನು ಕತ್ತರಿಸಿ ಹಾಕುವುದಕ್ಕೆ ಆಯುಧವನ್ನು ಸಿದ್ಧಮಾಡಿಟ್ಟುಕೊಂಡನು. ಆತನ ಹೆಂಡಿತಿಯು ಬಹಳ ಬುದ್ಧಿಮಂತಳು. ಗಂಡನು ತನ್ನನ್ನು ಕೊಲ್ಲುವುದಕ್ಕೆ ಅಟ್ಟಿಸಿಕೊಂಡು ಬರುವುದನ್ನು ಕಂಡು ಹೊರಗೆ ಓಡಿಬಂದು ಕಗ್ಗತ್ತಲೆಯಲ್ಲಿ ಎಲ್ಲಿಯೋ ಮಾಯವಾಗಿ ಬಿಟ್ಟಳು.

ಆ ಸಮಯದಲ್ಲಿ ದಡದಡನೆ ಮಳೆಯು ಸುರಿಯುತ್ತಿತ್ತು. ದಾರಿಯಲ್ಲಿ ಆರೂ ಕಾಣಿಸುತ್ತಿರಲಿಲ್ಲ. ಆವಳೋ ಒಬ್ಬ ಹೆಂಗುಸು ದಾರಿಯಲ್ಲಿ ಬರುತ್ತಿದ್ದು, ಮಳೆಯ ಏಟನ್ನು ಸಹಿಸಲಾರದೆ ಆರ ಮನೆಯ ಬಾಗಿಲಿನಲ್ಲಾದರೂ ವಿಶ್ರಮಿಸಿಕೊಳ್ಳೋಣವೆಂದು ಓಡಿಬರುತ್ತಿದ್ದಳು. ಗುರುದಾಸನು ಆಕೆಯನ್ನೇ ತನ್ನ ಹೆಂಡಿತಿಯೆಂದು ತಿಳಿದು ಅವಳನ್ನು ಕೊಲೆ ಮಾಡಿಬಿಟ್ಟನು. ರಕ್ತ ನೋಡಿದೊಡನೆ ಗುರುದಾಸನಿಗೆ ಬಹಳ ಭಯವಾಯಿತು. ಅವನು ಮರುದಿನ ಬೆಳಗ್ಗೆ ನನ್ನ ಹತ್ತಿ

ರಕ್ಕೆ ಓಡಿಬಂದು—ಸ್ವಾಮಿ, ನಾನು ನನ್ನ ಹೆಂಡಿತಿಯನ್ನು ಕೊಲೆ ಮಾಡಿಬಿಟ್ಟೆನು. ಈಗ ನಾನೇನು ಉಪಾಯ ಮಾಡಬೇಕು? ತಿಳಿಸೋಣವಾಗಲಿ ಎಂದು ಕೇಳಿದನು.

ನಾನು ಆತನಿಂದ ವಿಷಯವೆಲ್ಲವನ್ನೂ ಕೇಳಿ ಈ ರೀತಿಯಲ್ಲಿ ಹೇಳಿದೆನು. "ಅಯ್ಯಾ! ನೀನು ರಾಮನಗರವನ್ನು ಬಿಟ್ಟು ಎಲ್ಲಿಗಾದರೂ ಓಡಿಹೋಗಬೇಡ. ಹಾಗೆ ಮಾಡುವುದಾದರೆ ನೀನು ಬೇಗ ಸಿಕ್ಕಿಹೋಗುತ್ತೀಯೆ. ಆದುದರಿಂದ ನೀನು ಇದ್ದಲ್ಲಿಯೇ ಇದ್ದು ಬಿಡು, ಮುಂದೆ ದೇವರು ಮಾಡಿಸಿದುದಾಗಲಿ."

ಹರಿ—ಅದಕ್ಕೆ ಅವನೇನೆಂದನು?

ಕಾಳೀ—ಆತನು ನನ್ನ ಮಾತಿಗೆ ಒಪ್ಪಿಕೊಂಡನಲ್ಲದೆ, ಕೆಲವು ದಿನಗಳ ಮಟ್ಟಿಗೆ ಅವಳನ್ನಾದರೂ ಮನೆಯಲ್ಲಿಟ್ಟುಕೊಂಡು, 'ಕೇಳಿದವರಿಗೆ ಅವಳೇ ತನ್ನ ಹೆಂಡಿತಿಯೆಂದು ಹೇಳಿಕೊಳ್ಳುತ್ತಾ ಕೆಲವು ಕಾಲವನ್ನು ಕಳೆಯುವೆನು. ಆಮೇಲೆ ನೋಡೋಣ,' ಎಂದು ಹೇಳಿದನು. ಅದೇ ಸರಿಯೆಂದು ನಾನು ಹೇಳಿದೆನು. ಆತನು ಹೊರಟು ಹೋಗಿ, ಒಂದೆರಡು ದಿನಗಳು ಕಳೆದನಂತರ ಮತ್ತೆ ಬಂದು—ಸ್ವಾಮಿ! ಏನೋ ಚೋದ್ಯವಾಗಿರುವುದು, ದಾರಿಯಲ್ಲಿ ನನ್ನ ಹೆಂಡಿತಿಯು ಹೋಗುತ್ತಿದ್ದುದನ್ನು ನಾನು ಕಣ್ಣಾರೆ ನೋಡಿದೆನು. ಸರ್ಕಾರದ ಹೆದರಿಕೆಯಿಂದ ಆಕೆಯ ಮೇಲಿನ ಕೋಪವೆಲ್ಲವನ್ನೂ ಮರೆತು ಆಕೆಯನ್ನೇ ಮನೆಗೆ ಬರುವಂತೆ ಕಾಲು ಹಿಡಿದುಕೊಂಡು ಬೇಡಿಕೊಂಡುದರ ಮೇಲೆ ಆಕೆಯು ನನ್ನ ಮನೆಗೆ ಬಂದು ಸಂಸಾರ ಮಾಡಿಕೊಂಡಿರುವಳು ಎಂದು ಹೇಳಿದನು.

ಹರಿ—ಹಾಗಾದರೆ ಗುರುದಾಸನು ಆವ ಹೆಂಗುಸನ್ನು ಕೊಲೆ ಮಾಡಿದುದು?

ಕಾಳೀ—ಕೊಲೆಯಾದವಳು ರಾಮ ರಾಜನ ಮೊಹಲ್ಲಾದವಳಲ್ಲವೆಂದು ತೋರುವುದು. ಆಕೆಯು ಆರೋ ಹಳ್ಳಿಯವಳಾಗಿರಬೇಕು. ಯಾಮಿಕರು ಆ ಮೊಹಲ್ಲೆಯಲ್ಲಿರತಕ್ಕ ಪ್ರತಿಯೊಂದು ಮನೆಯನ್ನೂ ಚೆನ್ನಾಗಿಯೂ ಪರೀಕ್ಷಿಸಿ ನೋಡಿದರಂತೆ. ಆಕೆಯಾರೆಂಬುದು ಅವರಿಗೆ ಪತ್ತೆಯಾಗಿಲ್ಲ.

ಇವರಿಬ್ಬರೂ ಈ ರೀತಿಯಲ್ಲಿ ಮಾತನಾಡುತ್ತಿದ್ದುದನ್ನು ಕೇಳಿ ನನಗೆ ಪರಮಾನಂದವಾಯಿತು. ಇಷ್ಟು ಸುಲಭವಾಗಿ ಕೊಲೆಯ ಮರ್ಮವು ಗೊತ್ತಾಗುವುದೆಂದು ನಾನು ಸ್ವಪ್ನದಲ್ಲಿಯೂ ಎಣಿಸಿರಲಿಲ್ಲ. ಧೀರೇಂದ್ರನು ಆವ ಕಾರಣದಿಂದ ಕಾಳೀಕಿಶೋರನ ಮೇಲೆ ಸಂದೇಹಪಟ್ಟನೋ ಅದು ಮಾತ್ರ ನನಗೆ ತಿಳಿಯದು. ಆತನ ಸೂಕ್ಷ್ಮವಾದ ಬುದ್ಧಿಯನ್ನು ಕುರಿತು ಎಷ್ಟು ಹೊಗಳಿದರೂ ಕೊಂಚವೇ

ಸರಿ. ಈದಿನ ಆತನು ಹೊಗೆಬಂಡಿಯ ನಿಲ್ದಾಣದಲ್ಲಿ ನನ್ನನ್ನು ಇದಿರುಗೊಳ್ಳದಿದ್ದರೆ ಆತನ ಕೆಲಸವೆಲ್ಲವೂ ಕೆಟ್ಟು ಹೋಗುತ್ತಿದ್ದಿತು. ನಾನು ಆತನನ್ನು ಕಂಡುದು ದೈವಯೋಗವೇ ಸರಿ.

---

## ಆರನೆಯ ಅಧ್ಯಾಯ

### (ಧೀರೇಂದ್ರನ ಹೇಳಿಕೆ)

ನಾನು ಸೂಳೆಯ ಮನೆಯನ್ನು ಬಿಟ್ಟು ಹೊರಗೆ ಬಂದು ತ್ರಿಪುರಾರಿಯನ್ನು ಬಹಳವಾಗಿ ಹುಡುಕಿದೆನು. ಆತನು ನನಗೆ ಎಲ್ಲಿಯೂ ಸಿಕ್ಕದೆ ನಾನು ನಿರಾಶನಾಗಿ ಒಂದು ಗಲ್ಲಿಯ ಮಾರ್ಗವಾಗಿ ಹಿಂದಿರುಗಿ ಬರುತ್ತಿರುವಲ್ಲಿ ತ್ರಿಪುರಾರಿ ಮತ್ತು ಅವನನ್ನು ಕೂಗಿ ಕರೆದುಕೊಂಡು ಹೋದ ಗೋಪಾಲ ಇವರಿಬ್ಬರೂ ನನಗೆ ದೂರದಲ್ಲಿ ಕಾಣಿಸಿಕೊಂಡರು. ನಾನು ಅವರಿಗೆ ಕಾಣಿಸದಂತೆ ಒಂದು ಮರೆಯಾಗಿದ್ದ ಸ್ಥಳದಲ್ಲಿ ನಿಂತುಕೊಂಡು ಅವರ ಸಂಭಾಷಣೆಯನ್ನು ಕೇಳ ತೊಡಗಿದೆನು.

ತ್ರಿಪುರಾರಿಯು ಗೋಪಾಲನನ್ನು ಕುರಿತು—ಗೋಪು, ಏನಾಶ್ಚರ್ಯ! ಸೂಳೆಯ ಮನೆಯಲ್ಲಿ ನನ್ನ ಪಕ್ಕದಲ್ಲಿ ಕುಳಿತಿದ್ದವನು ಧೀರೇಂದ್ರನೆ?

ಗೋಪಾಲ—ಆಶ್ಚರ್ಯವೇನು? ಆತನನ್ನು ನಾನು ಚೆನ್ನಾಗಿಯೂ ಬಲ್ಲೆನು. ನಿಜವಾಗಿಯೂ ನಿನಗೆ ಬದುಕಬೇಕೆಂಬ ಆಸೆಯು ಇರುವುದಾದರೆ ಈ ಕೂಡಲೆ ತಲೆಯನ್ನು ಮರೆಮಾಡಿಕೊಳ್ಳು.

ಗೋಪಾಲನೂ ತ್ರಿಪುರಾರಿಯೂ ಇದಕ್ಕೆ ಮೊದಲು ಏನೇನು ಮಾತನಾಡುತಿದ್ದರೋ ಅದು ನನಗೆ ತಿಳಿಯದು. ನಾನು ಅವರ ಮಾತನ್ನು ಕೇಳಿ ಅವರು ನನ್ನ ವಿಷಯದಲ್ಲಿ ಸಂದೇಹ ಪಟ್ಟಿರುವರೆಂಬುದನ್ನು ಚೆನ್ನಾಗಿಯೂ ತಿಳಿದೆನು. ಇದರಲ್ಲಿ ಆವ ವಿಧವಾದ ಸಂಶಯವೂ ಇರುವುದಿಲ್ಲ.

ತ್ರಿಪುರಾರಿಯು ಇಷ್ಟು ಮಾತನ್ನಾಡಿ ಗೋಪಾಲನಿಂದ ಅಪ್ಪಣೆಯನ್ನು ತೆಗೆದುಕೊಂಡು ಹೊರಟನು. ನಾನೂ ಆತನನ್ನು ಹಿಂಬಾಲಿಸಿದೆನು ಕೊಂಚ ದೂರ ಹೋಗುವುದರೊಳಗಾಗಿ ನಾನು ಒಬ್ಬ ಯಾಮಿಕನನ್ನು ಕಂಡು ಅವನ ಹೆಸರು ಹಿಡಿದು ಕೂಗಿದೆನು.

ತ್ರಿಪುರಾರಿಯು ಸರಕ್ಕನೆ ಹಿಂತಿರುಗಿ ನೋಡಿ ಓಡಲು ಯತ್ನಮಾಡಿದನು. ನಾನು ಆ ಕೂಡಲೆ ಯಾಮಿಕನಿಗೆ—ಹಿಡಿ! ಹಿಡಿ! ಎಂದು ಕೂಗಿ ಹೇಳಿದೆನು.

ಯಾಮಿಕನು ಬಲವಾಗಿ ಓಡಿಹೋಗಿ ತ್ರಿಪುರಾರಿಯನ್ನು ಹಿಂಗಟ್ಟುಮುರಿಕಟ್ಟಿ ಹಿಡಿದುತಂದನು. ತ್ರಿಪುರಾರಿಯು ತಪ್ಪಿಸಿಕೊಂಡು ಹೋಗಲು ಎಷ್ಟೋ ಯತ್ನ ಮಾಡಿದನು, ಆದರೆ ಬಲವಾಗಿದ್ದ ಯಾಮಿಕನ ಮುಂದೆ ಅವನ ಯತ್ನವಾವುದೂ ಸಾಗದೇಹೋಯಿತು.

ತ್ರಿಪುರಾರಿಯು ಸಿಕ್ಕಿಬಿದ್ದು ಪ್ರಾಣಭಯದಿಂದ ಅಳತೊಡಗಿದನು. ಆ ಅಳುವಿಗೆ ಯಾಮಿಕನ ದೊಣ್ಣೆಯ ಪೆಟ್ಟು ಕೊಂಚ ಮಟ್ಟಿಗೆ ಸಾಹಾಯ್ಯಮಾಡಿತೆಂದು ಹೇಳಿದರೂ ಹೇಳಬಹುದು. ಏಟಿನಿಂದಲೂ ಭಯದಿಂದಲೂ ಅಳುತ್ತಾ ತ್ರಿಪುರಾರಿಯು! ನನಗೇನೂ ಗೊತ್ತಿಲ್ಲ ಬುದ್ಧೀ—ನಾನೆಂದಿಗೂ ಕೊಲೆ ಮಾಡಿದವನಲ್ಲ! ನನ್ನನ್ನು ಬುಟ್ಬು ಬುಡಿ ಬುದ್ಧೀ! ಎಂದು ಅಂಗಲಾಚಿಕೊಂಡನು.

ನಾನು ತ್ರಿಪುರಾರಿಯ ಮಾತಿಗೆ ಕಿವಿಕೊಡದೆ ಅವನನ್ನು ಯಾಮಿಕರ ಠಾಣೆಗೆ ಕರೆದುಕೊಂಡು ಹೋಗಿ, ಅಲ್ಲಿದ್ದ ರಕ್ಷಾಧಿಕಾರಿಗಳನ್ನು ಎಬ್ಬಿಸಿ ತ್ರಿಪುರಾರಿಯನ್ನು ಅವರ ಸ್ವಾಧೀನಕ್ಕೆ ಬಿಟ್ಟೆನು. ಅವರು ತ್ರಿಪುರಾರಿಯ ಹೇಳಿಕೆಯನ್ನು ತೆಗೆದುಕೊಳ್ಳುವುದಕ್ಕೆ ಮೊದಲು ಮಾಡಿದರು.

ನಾನು ತ್ರಿಪುರಾರಿಯ ಕಡೆ ತಿರುಗಿಕೊಂಡು--ಚಂಡಾಲ! ಏನ ಹೇಳಿದೆ? ನಿನಗೇನೂ ಗೊತ್ತಿಲ್ಲವೊ? ಅಯ್ಯೊ ಪಾಪ! ನೀನು ಕೊಲೆ ಮಾಡಿದವನಲ್ಲವೇನೊ! ಎಷ್ಟು ದಿವಸ ತಾನೇ ನಿಮ್ಮ ದುಷ್ಕಾರ್ಯಗಳು ರಟ್ಟಾಗದೇ ಇದ್ದಾವು? ನೀನಲ್ಲವೇ ಚಂದ್ರಶೇಖರನ ಸಲಹೆಯಿಂದ ಕೊಲೆಯಲ್ಲಿ ಕೈಹಾಕಿದವನು? ಇರಲಿ; ನಿನ್ನನ್ನು ಸಿಗಿದು ಊರಿಗೆ ತೋರಣ ಕಟ್ಟದೇ ಬಿಡುವುದಿಲ್ಲ. ಪುಂಡರು ಸೇರಿಕೊಂಡು ದೇಶವನ್ನೆಲ್ಲಾ ಹಾಳುಮಾಡುತ್ತಿರುವಿರಾ? ಎಂದು ಗದ್ದರಿಸಿ ಮಾತನಾಡಿದೆನು.

ನಾನಾಡಿದ ಮಾತುಗಳನ್ನು ಕೇಳ ತ್ರಿಪುರಾರಿಯ ಮುಖವು ಸಪ್ಪೆಯಾಯಿತು, ಅವನ ಮೈಯಲ್ಲಿ ನಡುಕ ಬಂದು ನಿಂತಿರಲಾರದೆ ನಿಂತಲ್ಲಿಯೇ ಕುಳಿತುಬಿಟ್ಟನು.

ನಾನು ಮತ್ತೆ ಮಾತನಾಡಿದೆನು :—ಕಳ್ಳ! ಕೇಳಿದ ಪ್ರಶ್ನೆಗೆ ಸರಿಯಾದ ಉತ್ತರಕೊಡಬೇಕು. ಎಚ್ಚರಿಕೆ! ನನಗೆ ಗೊತ್ತಿಲ್ಲ, ನನಗೆ ತಿಳಿಯದು, ನಾನು ಕಾಣೆನೆಂದು ಏನಾದರೂ ಹೇಳುವುದಾದರೆ ನಿನ್ನ ಮೂಳೆಯನ್ನು ಪುಡಿ ಪುಡಿ ಮಾಡಿ ಬಿಡುವೆನು. ಆಗ ನಿನ್ನ ಸ್ನೇಹಿತರಾದ ಚಂದ್ರಶೇಖರ, ಕಾಳೀಕಿಶೋರ,ಗೋಪಾಲ, ಹರಿ, ಸಿದ್ದ, ಮಾದ ಇತ್ಯಾದಿಗಳಾರೂ ನಿನ್ನ ರಕ್ಷಣೆಗಾಗಿ ಬರುವ ಹಾಗಿಲ್ಲ. ನಿನಗೆ ಒಳ್ಳೆಯದಾಗಬೇಕೆಂದು ಇಷ್ಟವಿರುವುದಾದರೆ ನಡೆದ ಸಂಗತಿಗಳನ್ನು ನಡೆದಂತೆಯೇ ಇಲ್ಲಿ ಬರೆಯಿಸು, ಇಲ್ಲವಾದರೆ ನಿನ್ನ ಪರಿಣಾಮ ನನ್ನ ಕೈಯಲ್ಲಿರುವುದು.

ತ್ರಿಪುರಾರಿ—ನನಗೆ ತಿಳಿದಿರುವುದೆಲ್ಲವನ್ನೂ ನಿಜವಾಗಿಯೂ ಹೇಳಿಬಿಡುವೆನು. ನನ್ನ ಗತಿ ?

ನಾನು—ಚಂದ್ರಶೇಖರನಿಗೂ ನಿನಗೂ ಸಂಬಂಧವೆಂಥದು ?

ತ್ರಿಪುರಾರಿ—ನಾನು ಆವಾಗಲೂ ಪತ್ರಸೃಷ್ಟಿ ಮಾಡತಕ್ಕವನು. ಇತರರ ಅಕ್ಷರವನ್ನು ನೋಡಿದರೆ, ನಾನು ಕೊಂಚವೂ ಭೇದವಿಲ್ಲದಂತೆ ಅದರಂತೆಯೇ ಬರೆಯತಕ್ಕವನು.

ನಾನು—ಚಂದ್ರಶೇಖರನಿಗೆ ನೀನೇನ ಬರೆದುಕೊಟ್ಟಿರುವೆ ?

ತ್ರಿಪುರಾರಿ—ಒಂದು ಮೋಸದ ಉಯಿಲನ್ನು ನಿರ್ಮಾಣಮಾಡಿಕೊಟ್ಟಿರುವೆನು.

ನಾನು—ಆರ ಉಯಿಲು ?

ತ್ರಿಪುರಾರಿ—ಮಧುಸೂದನ ಶರ್ಮನದು.

ನಾನು—ಮಧುಸೂದನನು ಉಯಿಲು ಗಿಯಿಲು ಏನಾದರೂ ಬರೆದು ಇಟ್ಟಿರುವನೋ ?

ತ್ರಿಪುರಾರಿ—ಬರೆದಿಟ್ಟಿರುವನು.

ನಾನು—ಎಷ್ಟುದಿನವಾಗಿರಬಹುದು ?

ತ್ರಿಪುರಾರಿ—ಪ್ರಾಯಿಕವಾಗಿ ಎರಡು ಮೂರು ತಿಂಗಳಾಗಿರಬಹುದು.

ನಾನು—ಪತ್ರಸೃಷ್ಟಿ ಮಾಡಲು ಕಾರಣವೇನು ?

ತ್ರಿಪುರಾರಿ—ಚಂದ್ರಶೇಖರನಿಗಾಗಿ ಮಧುಸೂದನನು ತನ್ನ ಉಯಿಲಿನಲ್ಲಿ ಚಂದ್ರಶೇಖರನ ಹೆಸರನ್ನೇ ಎತ್ತಿಲ್ಲ. ಆದುದರಿಂದ ಚಂದ್ರಶೇಖರನು ಕೋಪದಿಂದ ಉಯಿಲನ್ನು ಸೃಷ್ಟಿ ಮಾಡಿಸಿರುವನು.

ನಾನು—ಆದಿನ ಸಾಯಂಕಾಲದಲ್ಲಿ ನೀನು ಇಬ್ಬರೊಡನೆ ಮಾತನಾಡುತ್ತಿದ್ದೆಯಲ್ಲಾ, ಅವರಿಬ್ಬರಾರು ?

ತ್ರಿಪುರಾರಿ—ಒಬ್ಬನು ಚಂದ್ರಶೇಖರ. ಮತ್ತೊಬ್ಬಳು ಆತನು ಇಟ್ಟುಕೊಂಡಿರುವ ಲಲಿತೆಯೆಂಬ ಸೂಳೆ.

ನಾನು—ಸೂಳೆಯು ಗಂಡಸಿನ ವೇಷವನ್ನು ಹಾಕಿ ಕೊಂಡಿದ್ದುದೇತಕೆ ?

ತ್ರಿಪುರಾರಿ—ಅದೊಂದು ವಿಧವಾದ ಸೊಗಸೆಂದು. ಗಂಡಸಿನ ವೇಷದಲ್ಲಿರುವ ಹೆಂಗುಸನ್ನು ಗಂಡನಾದವನು ಹೇಗೆ ಪ್ರೀತಿಸುವನೆಂದು ಆಕೆಯು ಆಗಿಂದಾಗ ಈರೀತಿಯಾದ ವೇಷವನ್ನು ತಾಳಿ ಸಂಜೆಯು ಹೊತ್ತಿನಲ್ಲಿ ಬೀದಿಬೀದಿ ತಿರುಗುವಳು.

ನಾನು—ಮಧುಸೂದನನು ಚಂದ್ರಶೇಖರನಿಗೇನೂ ಕೊಟ್ಟಂತೆ ತನ್ನ ಉಯಿಲಿನಲ್ಲಿ ಕಾಣಿಸಿಲ್ಲವೆ ?

ತ್ರಿಪುರಾರಿ—ಇಲ್ಲ. ಆಸ್ತಿಯಲ್ಲಿ ಶಿವಕುಮಾರನಿಗೆ ನಾಲ್ಕಾಣೆ ಭಾಗವೆಂದೂ, ತನ್ನ ಮಗಳಿಗೆ ಹನ್ನೆರಡಾಣೆ ಭಾಗವೆಂದು ಬರೆದಿರುವುದು.

ನಾನು—ಮೋಸದ ಉಯಿಲಿನಲ್ಲಿ ಬರೆದಿರುವುದೇನು ?

ತ್ರಿಪುರಾರಿ—ಅದರಲ್ಲಿ ಚಂದ್ರಶೇಖರನಿಗೆ ಆರಾಣೆಭಾಗವೆಂದೂ, ಶಿವಕುಮಾರನಿಗೆ ನಾಲ್ಕಾಣೆ ಭಾಗವೆಂದೂ, ಯಜಮಾನನ ಮಗಳಿಗೆ ಆರಾಣೆ ಭಾಗವೆಂದೂ ಬರೆಯಲ್ಪಟ್ಟಿದೆ.

ನಾನು—ಮಧುಸೂದನನನ್ನು ಕೊಲೆ ಮಾಡಿದವರಾರು ?

ತ್ರಿಪುರಾರಿ—ಹರಿ.

ನಾನು—ಹರಿಯೆಂಬುವನು ಆರ ಮಾತಿನಿಂದ ಆವ ಲಾಭಕ್ಕಾಗಿ ಮಧುಸೂದನನನ್ನು ಕೊಲೆಮಾಡಿದನು ?

ತ್ರಿಪುರಾರಿ—ಹರಿಯು ಮೊದಲು ಮಧುಸೂದನನ ಹತ್ತಿರ ಕೆಲಸಕ್ಕೆ ಇದ್ದನು. ಏನೋ ಕಾರಣದಿಂದ ಮಧುಸೂದನನು ಅವನನ್ನು ಜೋಡಿನಿಂದ ಹೊಡೆದು ಮನೆಯಿಂದಟ್ಟಿಬಿಟ್ಟನು. ಅದು ಮೊದಲು ಹರಿಗೆ ಮಧುಸೂದನನ ಮೇಲೆ ಜ್ಞಾತಿದ್ವೇಷವು ಕಾಲಹಾಕಿಕೊಂಡಿತು. ಸಮಯ ಸಿಕ್ಕಿದಾಗ ಮಧುಸೂದನನನ್ನು ಕೊಂದುಹಾಕಿ ಬಿಡವುದಾಗಿ ಹರಿಯು ಪ್ರತಿಜ್ಞೆ ಮಾಡಿಕೊಂಡನು.

ನಾನು—ಹರಿಯು ಈಗ ಆರಲ್ಲಿ ಕೆಲಸಕ್ಕೆ ಇರುವನು ?

ತ್ರಿಪುರಾರಿ—ಲಲಿತಾಸಾನಿಯಲ್ಲಿ.

ನಾನು—ಆತನಿಗೆ ಸೂಳೆಯಲ್ಲಿ ಕೆಲಸ ಸಿಕ್ಕಿದ ಬಗೆ ಹೇಗೆ ?

ತ್ರಿಪುರಾರಿ—ಮಧುಸೂದನನು ಹರಿಯನ್ನು ಓಡಿಸಿದಾಗ ಚಂದ್ರಶೇಖರನು ಅವನನ್ನು ತನ್ನ ಸೂಳೆಯ ಹತ್ತಿರ ಕೆಲಸಕ್ಕಾಗಿ ನಿಯಮಿಸಿಕೊಂಡನು.

ನಾನು—ಆದಿನ ರಾತ್ರಿ ಮಧುಸೂದನನನ್ನು ಕೊಲೆ ಮಾಡುವುದಕ್ಕೋಸ್ಕರ ಚಂದ್ರಶೇಖರನು ಹರಿಯನ್ನು ಹುಡುಕಿಕೊಂಡು ಬರಲೋಸುಗ ಹೋಗಿದ್ದನೋ ?

ತ್ರಿಪುರಾರಿ—ಅಹುದು.

ನಾನು—ನಿನಗೆ ಇದೆಲ್ಲ ಹೇಗೆ ಗೊತ್ತು ?

ತ್ರಿಪುರಾರಿ—ಚಂದ್ರಶೇಖರನು ನನಗೆ ಎಲ್ಲ ಸಂಗತಿಯನ್ನೂ ತಿಳಿಸಿರುವನು.

ನಾನು—ಹರಿಯು ಕೊಲೆಮಾಡುವಾಗ ಮಧುಸೂದನನು ಆವ ಅವಸ್ಥೆಯಲ್ಲಿದ್ದನು ?

ತ್ರಿಪುರಾರಿ—ಏನೋ ಆಲೋಚನೆಯಿಂದ ಮಧುಸೂದನನಿಗೆ ರಾತ್ರಿ ನಿದ್ದೆ ಬಾರದಿರಲು ಅವನು ಪಕ್ಕದಲ್ಲಿರುವ ದೇವಸ್ಥಾನದ ಗರ್ಭಗುಡಿಯಲ್ಲಿ ಕುಳಿತು ದೇವರನ್ನು ಸೇವಿಸುತ್ತಿದ್ದನು.

ನಾನು—ಆಮೇಲೆ.

ತ್ರಿಪುರಾರಿ—ಚಂದ್ರಶೇಖರನು ಗುಟ್ಟಾಗಿ ಗುಡಿಯೊಳಗೆ ಪ್ರವೇಶಮಾಡಿ ತಾನು ಉದ್ದೇಶಪಟ್ಟು ತಂದಿದ್ದ ಜ್ಞಾನತಪ್ಪಿಸುವ ದ್ರಾವಕವನ್ನು ಯಜಮಾನನ ಮೂಗಿಗೆ ಹಿಡಿದು ಜ್ಞಾನ ತಪ್ಪಿಸಿ ಅವನನ್ನು ಕೆಡಹಿದನು.

ನಾನು—ಸುಳ್ಳು ಉಯಿಲಿಗೆ ಇಬ್ಬರು ಸಾಕ್ಷಿ ಹಾಕಿರುವರಲ್ಲ ! ಅವರ ಹೆಸರೇನು ?

ತ್ರಿಪುರಾರಿ—ಒಬ್ಬನ ಹೆಸರು ಗೋಪಾಲ. ಮತ್ತೊಬ್ಬನ ಹೆಸರು ಗಂಗಾಧರ.

ನಾನು—ಸೂಳೆಯ ಮನೆಯಿಂದ ನಿನ್ನನ್ನು ಹೊರಗೆ ಕರೆದುಕೊಂಡು ಹೋದವರಾರು ?

ತ್ರಿಪುರಾರಿ—ಅವನೇ ಗೋಪಾಲನು.

ನಾನು—ಅವನು ನಿನ್ನನ್ನು ಕರೆದುಕೊಂಡುಹೋಗಿ ನಿನಗೆ ಏನೇನ ಹೇಳಿದನು ?

ತ್ರಿಪುರಾರಿ—ಆತನು ಹೇಳಿದುದು.—

"ತ್ರಿಪುರಾರಿ ! ಚಂದ್ರಶೇಖರನನ್ನು ನಾನು ಕೊಂಚ ಹೊತ್ತಿಗೆ ಮುಂಚೆ ನೋಡಿದ್ದೆನು. ಆತನಿಂದ ನಮಗಾಗಿ ನೀನು ೫೦ ರೂಪಾಯಿಗಳನ್ನು ತೆಗೆದು ಕೊಂಡಂತೆ ತಿಳಿದು ಬಂದಿತು. ನೀನು ಲಲಿತೆಯ ಮನೆಯಿಂದ ಹೊರಟ ಕೂಡಲೆ ನಿನ್ನ ಹಿಂದೆಹಿಂದೆಯೇ ಆರೋ ಒಬ್ಬರು ಅನುಸರಿಸಿ ಹೋಗುತ್ತಿದ್ದುದನ್ನು ಆತನು ನೋಡಿ, ಏನೋ ಸಂಶಯಪಟ್ಟವನಾಗಿ, ನಿಮ್ಮಿಬ್ಬರ ಹಿಂದೆ ಹೊರಟನು. ನೀನು ಗಾಡಿಮಾಡಿಕೊಂಡು ಹೋಗಲು, ಕೂಡಲೆ ಆತನೂ ಗಾಡಿಮಾಡಿದನು. ಇದನ್ನು ನೋಡಿ ಚಂದ್ರಶೇಖರನಿಗೆ ಬಹಳ ಭಯವಾಯಿತು. ಅವನು ಆ ಕೂಡಲೆ ಲಲಿತೆಯ ಮನೆಗೆ ಹೋಗಿ ತಲೆಯ ಮೇಲೆ ಕೈಯನ್ನಿಟ್ಟುಕೊಂಡು ಬಲವಾಗಿ ಆಲೋಚಿಸುತ್ತಿದ್ದನು. ನಾನು ಆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಹೋದೆನು. ಚಂದ್ರಶೇಖರನು ನನ್ನನ್ನು ನೋಡಿದ ಕೂಡಲೇ ಗಾಡಿಮಾಡಿಕೊಂಡು ನಿನ್ನಲ್ಲಿಗೆ ಹೋಗಿ ನಡೆದ ಸಂಗತಿಗಳನ್ನು ತಿಳಿಯಪಡಿಸುವಂತೆ ಹೇಳಿದನು. ಇತರರ ಹೆಸರು ಹೇಳಿ ನೀನು ೫೦ ರೂಪಾಯಿ ತೆಗೆದುಕೊಂಡೆ ಎಂದು ನಾನು ಕೇಳಿದ ಕೂಡಲೇ, ನೀನು ಇಂತಹ ಸ್ಥಳದಲ್ಲಿಯೇ ಇರುವೆಯೆಂದು ಗೊತ್ತಾಯಿತು. ನಾನು ಬಂದು ನೋಡ ಲಾಗಿ ಊಹಿಸಿದ್ದಂತೆಯೇ ನೀನು ಸೂಳೆಯ ಮನೆಯಲ್ಲಿದ್ದೆ. ನಿನ್ನ ಪಕ್ಕದಲ್ಲಿಯೇ ಪತ್ತೇದಾರ್ ಧೀರೇಂದ್ರನೂ ಕುಳಿತಿದ್ದುದನ್ನು ನೋಡಿದೆನು. ಆಗ ನನ್ನ ಪ್ರಾಣವೇ ಹಾರಿಹೋಯಿತು. ಆದುದರಿಂದಲೇ ನಿನ್ನನ್ನು ನಾನು ಹೊರಗೆ ಕರೆದುಕೊಂಡು ಬಂದುದು ? "

ನಾನು—ಆಗ ನಿನಗೆ ತೋರಿದುದೇನು ?

ತ್ರಿಪುರಾರಿ—ಆ ಕೂಡಲೇ ದೇಶವನ್ನು ಬಿಟ್ಟು ಓಡಿ ಹೋಗಬೇಕೆಂದು ನನಗೆ ಬೋಧೆಯಾಯಿತು.

ನಾನು—ಓಡಿಹೋಗಲು ನಿನಗೆ ಸಲಹೆ ಕೊಟ್ಟವರಾರು ?

ತ್ರಿಪುರಾರಿ—ಚಂದ್ರಶೇಖರನೇ.

ನಾನು—ನೀನು ಆಗಲೇ ಓಡಿಹೋಗಲಿಲ್ಲವೇತಕೆ ?

ತ್ರಿಪುರಾರಿ—ಓಡಿಹೋಗುವುದು ಹೇಡಿಯ ಕೆಲಸವೆಂದು ತಿಳಿದು, ಇಲ್ಲಿಯೇ ಇದ್ದು ನಡೆಯುವುದನ್ನು ನೋಡಬೇಕೆಂಬ ಆಸೆಯು, ನನಗೆ ಪಲಾಯನ ವಾಗಲು ಆಸ್ಪದಕೊಡಲಿಲ್ಲ.

---

## ಏಳನೆಯ ಅಧ್ಯಾಯ

(ವೀರೇಂದ್ರನ ಹೇಳಿಕೆ)

ಹರಿ ಕಾಳೀಕಿಶೋರರ ಸಂಭಾಷಣೆಯು ಮುಗಿಯಿತು. ಅವರಿಬ್ಬರೂ ತಮ್ಮ ತಮ್ಮ ಸ್ಥಳದಲ್ಲಿ ಹೋಗಿ ಮಲಗಿದರು. ನನಗೆ ಮಾತ್ರ ಆ ರಾತ್ರಿಯಲ್ಲಿ ನಿದ್ರೆಯೆಂಬುದೇ ಬರಲಿಲ್ಲ. ಆವಾವುದೋ ಆಲೋಚನೆಗಳು ಬಂದು ನನ್ನ ನಿದ್ರೆಯನ್ನು ದೂರಮಾಡಿದುವು. ನಾನು ಅತಿ ಪ್ರಯಾಸದಿಂದ ಆ ರಾತ್ರಿಯನ್ನು ಕಳೆದೆನು. ಬೆಳಗಾಯಿತು. ನಾನು ಮನೆಯಲ್ಲಿ ಆವ ಗಲಾಟೆಯನ್ನೂ ಮಾಡದೆ ಮನೆಯ ಯಜಮಾನನ ಅಪ್ಪಣೆಯನ್ನು ತೆಗೆದುಕೊಂಡು ಹೊರಗೆ ಹೊರಟೆನು. ನಾನು ಹೊರಟವನು ನೆಟ್ಟಗೆ ಯಾಮಿಕರ ಠಾಣೆಗೆ ಹೋಗಿ ನನ್ನ ಪತ್ತೇದಾರಿಯ ಗುರುತನ್ನು ಅವರಿಗೆ ತೋರಿಸಿ ಅವರಿಂದ ಸಾಹಾಯ್ಯವನ್ನು ಪ್ರಾರ್ಥಿಸಿದೆನು. ಪತ್ತೇದಾರರಾದವರು ಆವ ಯಾಮಿಕರ ಠಾಣೆಗೆ ಹೋಗಿ, ಆರ ಸಾಹಾಯ್ಯವನ್ನು ಬೇಡಿದರೂ ಆವ ಯಾಮಿಕನೂ ಸಾಹಾಯ್ಯ ಮಾಡದೇ ಇರಕೂಡದು. ಆರಾದರೂ ಉದಾಸೀನ ಮಾಡುವುದಾದರೆ ಅವರ ಮೇಲೆ ರಾಜದಂಡನೆಯು ಬಲವತ್ತರವಾಗಿರುವುದು. ಸರ್ಕಾರದವರು ಪತ್ತೇದಾರರಿಗೆ ಈ ಆನುಕೂಲ್ಯವನ್ನು ಕಲ್ಪಿಸಿಕೊಟ್ಟಿರುವುದರಿಂದಲೇ ಅನೇಕ ವ್ಯವಹಾರಗಳು ನಿರಾಯಾಸವಾಗಿ ಫಲಿಸುವುವು.

ನನ್ನ ಕೋರಿಕೆಯ ಮೇರೆ ಯಾಮಿಕರ ಸಾಹಾಯ್ಯವು ದೊರೆಯಿತು. ಅವರು ಆವ ರೀತಿಯಲ್ಲಿ ನಡೆಯಬೇಕೆಂಬುದನ್ನು ಅವರಿಗೆ ಅಪ್ಪಣೆಮಾಡಿದೆನು. ಅನಂತರ ನಾನು ಕಾಳೀಕಿಶೋರನ ಮನೆಗೆ ಬಂದು ಸೇರಿದೆನು. ಕಾಳೀಕಿಶೋರನು ನಾನಿದ್ದಲ್ಲಿಗೆ ಬಂದನು. ಹರಿಯೂ ತಂಬಾಕನ್ನು ತೀಡಿಕೊಂಡು ನಮ್ಮೆಲ್ಲರಿಗೂ ಕೊಡುವುದಕ್ಕೆ ಅಲ್ಲಿಗೆ ಬಂದನು. ಆತನು ಬಂದ ಕೂಡಲೆ ಕಿಶೋರನನ್ನು ಕುರಿತು ಈ ಮಹಾಶಯರಾರೆಂದು ಕೇಳಿದನು.

ಕಾಳೀಕಿಶೋರನು ಏನೊಂದುತ್ತರವನ್ನೂ ಕೊಡುವುದಕ್ಕೆ ಮೊದಲೇ ನಾನು—ನಾನು ನಿನ್ನ ಕಾಲ ಮೃತ್ಯು; ನಾನಾರೆಂಬುದು ನಿನಗೆ ಗೊತ್ತಿಲ್ಲವೋ? ಎಂದೆನು.

**ಕಾಳೀಕಿಶೋರನು ಚಕಿತನಾಗಿ ಎದ್ದುನಿಂತನು. ಹರಿಯು ಪಲಾಯನ ವಾಗುವುದಕ್ಕೆ ಸಿದ್ಧನಾದನು. ನಾನು ಆ ಕ್ಷಣವೇ ಸೀಟಿಯನ್ನು ಹಾಕಲು, ನಾಲ್ಕು ಜನ ಯಾಮಿಕರು ಮನೆಯೊಳಗೆ ದಡಾಲ್ ಬಡಾಲ್ ಎಂದು ನುಗ್ಗಿದರು. ಆಗ ನಾನು ಹರಿಯನ್ನು ಕುರಿತು—ಹರಿ, ನೀನು ಈ ರೀತಿಯಲ್ಲಿ ಇನ್ನೂ ಎಷ್ಟು ಕೊಲೆಗಳನ್ನು ಮಾಡಿರುವೆ? ಎಂದು ಕೇಳಲಾಗಿ ಹರಿಯು ಬುದ್ಧಿಗೆಟ್ಟವನಾಗಿ— ಕೊಲೆ! ನಾನು ಎಂದಿಗೂ ಕೊಲೆ ಮಾಡಿದವನಲ್ಲವೆಂದನು.**

ಹರಿಯು ಆವಾಗ ಕೊಲೆ ಮಾಡಿದವನಲ್ಲವೆಂದು ಹೇಳಿದನೋ ಆಗ ಯಾಮಿಕರಿಬ್ಬರು ಎರಡು ಬಲವಾದ ಒದೆಗಳನ್ನು ಒದೆದರು. ಇನ್ನಿಬ್ಬರು ಯಾಮಿಕರು ಕಾಳೀಕಿಶೋರನ ಹತ್ತಿರ ಹೋಗಿ ನಿಲ್ಲಲು, ಅವನು ವಿಲಿವಿಲಿನೆ ಒದೆದುಕೊಂಡು, 'ಅಯ್ಯೋ! ಅಮ್ಮ! ಕುಯ್ಯೋ! ಮರೆಯೊ' ಎಂದು ಅರಚಿಕೊಳ್ಳುತ್ತಾ ನನ್ನನ್ನು ಒದೆಯಬೇಡಿರಿ, ನನ್ನನ್ನು ಒದೆಯಬೇಡಿರಿ, ನನಗೇನೂ ಗೊತ್ತಿಲ್ಲ, ನಾನು ಆವ ದೋಷದಿಂದಲೂ ದೋಷಿಯಾಗಿಲ್ಲ, ಎಂದು ಮೊರೆಯಿಟ್ಟನು.

ನಾನು—(ಹಲ್ಲು ಕಡಿಯುತ್ತಾ) ಕಿಶೋರ, ಗುರುದಾಸನಿಗೆ ನೀನು ಹೇಳಿದುದು ಜ್ಞಾಪಕದಲ್ಲಿರುವುದೋ? ಎಂದು ಕೇಳಿದೆನು. ಅದಕ್ಕೆ ಕಿಶೋರನು ಗಡಗಡನೆ ನಡುಗುತ್ತಾ—ಅವನು ಕೊಲೆ ಮಾಡಿದುದು ನಾನು ಬಲ್ಲೆನೇ? ನೀವು ಸುಮ್ಮನೆ ನನ್ನನ್ನು ಏತಕೆ ಹೆದರಿಸುವಿರಿ? ಎಂದು ಹೇಳಿದನು.

ನಾನು—ನೀನು ಅವನಿಗೆ ಸಲಹೆ ಕೊಟ್ಟುದುದೇನು?

ಕಾಳೀ—ಅವನು ತಿಳಿಯದೆ ಅಕೃತ್ಯವನ್ನು ಮಾಡಿ ಬಿಟ್ಟೆನೆಂದು ನನ್ನ ಮುಂದೆ ಹೇಳಿದನು. ನನ್ನನ್ನು ಹೇಗಾದರೂ ಮಾಡಿ ಬದುಕಿಸಬೇಕೆಂದು ಕೇಳಿದುದಕ್ಕೆ, ನನಗೆ ತೋರಿಬಂದುದನ್ನು ನಾನು ಹೇಳಿದೆನು. ನಿಮ್ಮ ಸರ್ಕಾರದಲ್ಲಿ ಆರೋ ಕೊಲೆ ಮಾಡಿದರೆ ಆರನ್ನೋ ಗಲ್ಲಿಗೆ ಹಾಕುವಷ್ಟು ಅನ್ಯಾಯವು ಇನ್ನೂ ಬಂದಿಲ್ಲ. ಕಷ್ಟಕಾಲವೆಂದು ಕೇಳಿದವರಿಗೆ ಏನಾದರೊಂದು ಹೇಳಬೇಕಾದುದು ಮನುಷ್ಯ ಸಾಮಾನ್ಯನಿಗೂ ಧರ್ಮವಲ್ಲವೆ?

ನಾನು—ಮಧುಸೂದನನ ಕೊಲೆಯಲ್ಲಿ ನೀನು ಒಳಸಂಚಲ್ಲವೋ?

ಕಾಳೀ—ಅಲ್ಲ. ನನಗೆ ಅದರ ಸಂಗತಿಯೇ ಗೊತ್ತಿಲ್ಲ. ನನಗೆ ಆಮೇಲೆ ಆ ಸಂಗತಿಯು ಗೊತ್ತಾಯಿತು. ಚಂದ್ರಶೇಖರನ ಸಲಹೆಯಿಂದ ಹರಿಯು ಮಧುಸೂದನನನ್ನು ಕೊಂದನಂತೆ.

ಕಷ್ಟಕಾಲದಲ್ಲಿ ಜನರ ಬುದ್ಧಿಯು ಭ್ರಮಿಸಿಹೋಗುವುದು ಸ್ವಭಾವವಾಗಿರುವುದು. ಅದರಂತೆಯೇ ಕಾಳೀಕಿಶೋರನಿಗೂ ಆಯಿತು. ಈ ಸಮಯದಲ್ಲಿ ಅವನು ಏನ ಹೇಳಿದನೋ ಅದು ಅವನಿಗೇ ತಿಳಿಯಲಿಲ್ಲ. ಹರಿಯು ಕಿಶೋರನ ಮಾತನ್ನು ಕೇಳಿ ಗಡಗಡನೆ ನಡುಗುತ್ತಾ-ಕಿಶೋರ, ಏನ ಮಾತನಾಡಿದೆ? ನೀನು ನಿನ್ನ ಕೈಯಿಂದಲೇ ನನ್ನನ್ನು ಹಿಡಿದು ಕೊಟ್ಟೆಯಲ್ಲಾ! ನಾಳೆ ನಿನ್ನನ್ನು ಗಲ್ಲಿಗೆ ಹಾಕುತ್ತಾರಲ್ಲ! ನಿನ್ನಿಂದಲೇ ನನಗೆ ಸರ್ವನಾಶವಾಗುವ ಹೊತ್ತು ಒದಗಬಹುದೇ! ಇರಲಿ ನಾನು ಸತ್ತರೂ ಸಾಯುವೆನು. ನೀನು ಮಾಡಿರುವ ಅಕೃತ್ಯವೆಲ್ಲವನ್ನೂ ಹೊರಗೆ ಹಾಕಿ, ನಿನ್ನನ್ನೂ ನನ್ನ ಜತೆಗೆ ಕರೆದುಕೊಳ್ಳುವೆನು. ಅಪಕಾರಮಾಡಿದವರಿಗೆ ಉಪಕಾರಮಾಡುವಷ್ಟು ಒಳ್ಳೆಯ ಗುಣವು ನನ್ನಲ್ಲಿಲ್ಲ. ಎಂದು ಗಡಗಡಾಯಿಸಿಕೊಂಡು ಆರ್ಭಟಿಸಿದನು.

ಲೋಕದಲ್ಲಿ ಜನಗಳು ಕೋಪದಿಂದ ಜಗಳವಾಡುತ್ತಿರುವಲ್ಲಿ ಒಬ್ಬರನ್ನೊಬ್ಬರು ಎತ್ತಿಹಾಕುವುದು ಸಹಜವಾಗಿರುವುದು. ಇಬ್ಬರ ಜಗಳದಲ್ಲಿ ಮೂರನೆಯವನಿಗೆ ಲಾಭವೆಂಬ ಗಾದೆಗೆ ಸರಿಯಾಗಿ ಪ್ರಕೃತ ಇವರಿಬ್ಬರ ವ್ಯವಹಾರದಲ್ಲ ನನ್ನ ಕೆಲಸವು ಕೈಗೂಡುವುದಕ್ಕಿಟ್ಟಿತು. ಇಂತಹ ಸಂದರ್ಭಗಳಲ್ಲಿ ಒಬ್ಬರನ್ನೊಬ್ಬರು ಎತ್ತಿ ಆಡುವ ಮಾತುಗಳು ಬಲುತೆರನಾಗಿ ನಿಜವಾಗಿಯೇ ಇರುವುವು. ಬಹು ಮಾತಿನಿಂದೇನು? ನನ್ನ ಕೆಲಸವು ಕೈಗೂಡಿತು. ನಾನು ಕಣ್ಣು ಸನ್ನೆ ಮಾಡಲು ಯಾಮಿಕರು ಹರಿ ಕಾಳೀಕಿಶೋರರಿಬ್ಬರಿಗೂ ಕೈಕೋಳಗಳನ್ನು ತೊಡಿಸಿ ಹೆಕ್ಕತ್ತಿನ ಮೇಲೆ ಕೈಹಾಕಿ ಠಾಣೆಗೆ ಎಳೆದುಕೊಂಡು ಹೋದರು. ಮನೆಯಲ್ಲಿದ್ದ ಹೆಂಗುಸು ಮಕ್ಕಳ ರೋದನ ಧ್ವನಿಯನ್ನು ಕೇಳಿ ನನ್ನ ಮನಸ್ಸು ಕರಗಿತು, ಆದರೆ ಹೆಂಗುಸರಿಗೋಸುಗ ಸರ್ಕಾರಕ್ಕೆ ವಿರೋಧವಾಗಿ ನಡೆಯಲಿಕ್ಕಾದೀತೆ! ಸರ್ಕಾರಕ್ಕೆ ವಿರೋಧವಾಗಿ ನಡೆಯುವುದಾದರೆ ಅನ್ಯಾಯವು ಹೆಚ್ಚಿ ದೇಶವು ಹಾಳಾಗುವುದಕ್ಕೆ ಮೊದಲಾಗುವುದು. ದೇಶದ ಕ್ಷೇಮವೇ ನಮ್ಮ ಕ್ಷೇಮವು. ನಮ್ಮೊಬ್ಬರ ಕ್ಷೇಮವು ದೇಶ ಕ್ಷೇಮದ ಕೋಟ್ಯಂಶದಲ್ಲಿ ಒಂದಾಗಿರುವುದು. ಆದುದರಿಂದ ನಾನು ಧರ್ಮಬದ್ಧನಾಗಿ ತಪ್ಪಿತಸ್ಥರನ್ನು ಶಿಕ್ಷೆಗೆ ಗುರಿಮಾಡುವುದಕ್ಕಾಗಿ ಈ ಕೆಲಸ ಮಾಡಿದೆನು. ಅವರಿಬ್ಬರೂ ನನ್ನನ್ನು ಬಹಳವಾಗಿ ಬೈದರು. ಉಂಡ ಮನೆಗೆ ಎರಡು ಬಗೆದೆನೆಂದರು. ನಾನೇನ ಮಾಡುವುದಕ್ಕಾದೀತು? ನನ್ನ ಕಾರ್ಯಗೌರವವು ಹಾಗಿರುವುದು. ದೋಷಿಗಳ ಬೈಗಳಿಗೆ ಕಿವಿ ಕೊಟ್ಟರೆ ಕೆಲಸವಾಗುವ ಬಗೆ ಹೇಗೆ? ನಾನಂತೂ ಕೆಲಸ ಮಾಡಿಬಿಟ್ಟೆನು.

## ಎಂಟನೆಯ ಅಧ್ಯಾಯ

### ಉ ಪ ಸ ಂ ಹಾ ರ

### (ಧೀರೇಂದ್ರನ ಹೇಳಿಕೆ)

ನಮ್ಮ ಪ್ರೀಯ ಮಿತ್ರನಾದ ವೀರೇಂದ್ರನ ಸಾಹಾಯ್ಯದಿಂದ ನನ್ನ ಅರ್ಥ ಕೆಲಸವು ಸಾಂಗವಾಗಿ ನೆರವೇರಿತು. ಮರುದಿನ ವೀರೇಂದ್ರನು, ಹರಿಕಾಳೀ ಕಿಶೋರರನ್ನು ಕರೆದುಕೊಂಡು ರಾಮನಗರಕ್ಕೆ ಬಂದನು. ಆತನ ಬಾಯಿಂದ ನಡೆದ ಎಲ್ಲಾ ಸಂಗತಿಯನ್ನೂ ಕೇಳಿ ನನಗೆ ತುಂಬಾ ಸಂತೋಷವಾಯಿತು.

ಮಧುಸೂದನನು ಒಬ್ಬ ದರಿದ್ರನ ಹೊಟ್ಟೆಯಲ್ಲಿ ಹುಟ್ಟಿದವನು. ಮೊದಲು ಒಂದು ಸಣ್ಣ ಕೆಲಸದಲ್ಲಿದ್ದನು. ಅವನು ಕೆಲಸದಲ್ಲಿದ್ದರೂ, ಅವನಿಗೆ ವ್ಯಾಪಾರ ದಲ್ಲಿ ತುಂಬಾ ಆಸೆಯಿದ್ದಿತು. ಆದುದರಿಂದ ಅವನು ಒಬ್ಬ ಸಾಹುಕಾರನೊಡನೆ ಭಾಗಕ್ಕೆ ಸೇರಿಕೊಂಡು ಕೊಂಚ ಹಣವನ್ನು ಸಂಪಾದಿಸಿದನು. ತಾನು ಸಂಪಾ ದಿಸಿದ ಹಣವನ್ನು ಮೂಲ ಧನವಾಗಿಟ್ಟುಕೊಂಡು ಸ್ವಂತವಾಗಿ ಬಟ್ಟೆಯಂಗಡಿ ಯನ್ನು ಇಟ್ಟನು. ಕೆಲವು ದಿನಗಳೊಳಗಾಗಿಯೇ ಹಣವನ್ನು ಸಂಪಾದಿಸಿ ಮನೆ ಯೊಂದನ್ನು ಕೊಂಡುಕೊಂಡನು.

ಅದೇ ಸಮಯದಲ್ಲಿ ವಿಶ್ವನಾಥನೆಂಬುವನೊಡನೆ ಆತನಿಗೆ ಪರಿಚಯ ವಾಯಿತು. ವಿಶ್ವನಾಥನು ಹಣದ ಲೇವಾದೇವಿಯನ್ನು ಮಾಡುತ್ತಿದ್ದ ಸಾಹು ಕಾರನಾಗಿದ್ದನು. ಮಧುಸೂದನನು ಮೊದಲು ಮೊದಲು ಲೇವಾದೇವಿಗಾಗಿ ವಿಶ್ವನಾಥನಿಗೆ ಜನಗಳನ್ನು ಹವಣಿಸಿ ಕೊಡುತ್ತಿದ್ದನು. ಅದರಿಂದಲೂ ಅವನಿಗೆ ಅಲ್ಪ ಸ್ವಲ್ಪ ಹಣ ಸಿಕ್ಕುತ್ತಿತ್ತು.

ನಮ್ಮ ಕಥಾ ಕಾಲದಲ್ಲಿ ವಿಶ್ವನಾಥನ ಹತ್ತಿರ ೪೦ ಲಕ್ಷ ರೂಪಾಯಿಗಳ ಆಸ್ತಿಯಿದ್ದಿತು. ಮಧುಸೂದನನು ವಿಶ್ವನಾಥನಿಗೆ ಬಹಳವಾಗಿ ಉಪಕಾರ ಮಾಡುತ್ತಿದ್ದುದರಿಂದ, ವಿಶ್ವನಾಥನು ಮಧುಸೂದನನನ್ನು ಬಹಳವಾಗಿ ಪ್ರೀತಿ ಸುತ್ತಿದ್ದನು. ಆ ವಿಶ್ವಾಸದ ಮೇಲೆಯೇ ವಿಶ್ವನಾಥನು ಮಧುಸೂದನನಿಗೆ ನಾನೂರು ಐನೂರು ರೂಪಾಯಿಗಳ ವರೆಗೂ ಪತ್ರಗಳಿಲ್ಲದೆ ಸಾಲ ಕೊಡುತ್ತಿದ್ದನು. ಆ ಹಣದಿಂದ ಮಧುಸೂದನನು ವ್ಯಾಪಾರವನ್ನು ಮಾಡುತ್ತಲೂ, ಸಾಲದೆ ಬಂದಾಗ ಮತ್ತೆ ಸಾಲ ತರುತ್ತಲೂ ಇದ್ದನು. ಅವನ ಬುದ್ಧಿಮಂತಿಕೆಯಿಂದ ವ್ಯಾಪಾರವು ಹೆಚ್ಚಿ ಕೆಲವು ವರ್ಷಗಳಲ್ಲೇ ಅವನು ಹಣಗಾರನೆನಿಸಿದನು.

ವಿಶ್ವನಾಥನು ಎರಡು ಸಲ ಮದುವೆಯಾದನು. ಇಬ್ಬರು ಹೆಂಡಿತಿಯರೂ ಸತ್ತರು ; ಇತರರು ಹೇಳಿದ್ದುದರ ಮೇಲೆ ಅವನು ಮೂರನೆಯ ಸಲ ಮದುವೆಯಾದನು. ಮುದಿತನದಲ್ಲಿ ಮತ್ತೆ ಮದುವೆಯಾಗಲು ಅವನಿಗಿಷ್ಟವಿರಲಿಲ್ಲ. ಗಂಡು ಮಕ್ಕಳು ಇಲ್ಲದಿದ್ದರೆ ತನ್ನ ಆಸ್ತಿಯೆಲ್ಲವೂ ಕಂಡವರ ಪಾಲಾಗುವುವೆಂದು ಕೊರಗಿ ಕೊರಗಿ ಮೂರನೆಯ ಹೆಂಡಿತಿಯಲ್ಲಾದರೂ ಗಂಡುಮಕ್ಕಳಾಗಬಹುದೆಂಬ ಆಸೆಯಿಂದ ಮತ್ತೆ ಮದುವೆಯಾದನು.

ವಿಶ್ವನಾಥನಿಗೆ ತನ್ನ ಮೂರನೆಯ ಹೆಂಡಿತಿಯಾದ ಸರಳ ಕುಮಾರಿಯಲ್ಲಿ ಬಹಳ ಪ್ರೀತಿಯಿದ್ದಿತು. ಸರಳೆಯೂ ಪತಿವ್ರತೆಯಾದುದರಿಂದ ತನ್ನ ಮುದಿಗಂಡನನ್ನು ತನ್ನ ಪ್ರಾಣಕ್ಕಿಂತಲೂ ಅಧಿಕವಾಗಿ ಪ್ರೀತಿಸುತ್ತಿದ್ದಳು.

ವಿಶ್ವನಾಥನು ತನ್ನ ವ್ಯಾಪಾರಕ್ಕೆ ಸಂಬಂಧಪಟ್ಟು ನಿತ್ಯವೂ ಉಪಯೋಗಿಸಲ್ಪಡುವ ಲೆಕ್ಕ, ಪತ್ರ, ನೋಟು ಮುಂತಾದವುಗಳನ್ನು ತನ್ನ ಕೊಣೆಯಲ್ಲಿ ಒಂದು ಕಬ್ಬಿಣದ ಪೆಟ್ಟಿಗೆಯಲ್ಲಿ ಇಟ್ಟುಕೊಂಡಿರುತ್ತಿದ್ದನು. ಉಳಿದ ಭಾರಿ ಭಾರಿ ಲೆಕ್ಕಪತ್ರಗಳನ್ನು ತನ್ನ ಹೆಂಡಿತಿಯ ಹತ್ತಿರ ಕೊಟ್ಟಿರುತ್ತಿದ್ದನು. ಆತನು ಸಾಯುವ ಕಾಲದಲ್ಲಿ ತನ್ನ ಹೆಂಡಿತಿಯನ್ನು ಕರೆದು ಈರೀತಿಯಾಗಿ ಹೇಳಿದನು:—

"ಸರಳೆ ! ನನಗೇನೋ ಭಯವು ತೋರುತ್ತಿರುವುದು. ಈ ಸಲದ ರೋಗದಲ್ಲಿ ನಾನು ಬದುಕುವಂತೆ ಕಂಡು ಬರುವುದಿಲ್ಲ. ನಾನು ನಿನ್ನ ಹತ್ತಿರ ಕೊಟ್ಟಿರುವ ಲೆಕ್ಕ ಪತ್ರಗಳನ್ನು ಮಾತ್ರ ಆವ ಕಾರಣದಿಂದಲೂ ಮತ್ತೊಬ್ಬನ ಕೈಯಲ್ಲಿ ಕೊಡಬೇಡ. ಅರ್ಥವು ಸಮಸ್ತ ಅನರ್ಥಗಳಿಗೆ ಮೂಲವೆಂಬುದು ನಿನಗೆ ನಾನು ಹೇಳಬೇಕಾದುದಿಲ್ಲ. ನಾನು ಸತ್ತ ತರುವಾಯ ನೀನು ಏನೂ ತಿಳಿಯದ ಹೆಂಗುಸೆಂದು ಅನೇಕ ಮೋಸಗಾರರು ಬಂದು ನಿನ್ನನ್ನು ಪೀಡಿಸುವರು ; ಅನೇಕರು ಇಲ್ಲದ ಸಂಬಂಧವನ್ನು ಹೂಡಿಕೊಂಡು ಬರುವರು. ನೀನು ಮಧುಸೂದನನನ್ನು ಹೊರತು ಮತ್ತಾರನ್ನೂ ನಂಬಬೇಡ. ನೀನು ಮಧುಸೂಧನನನ್ನು ಎಷ್ಟೇ ನಂಬಿದರೂ ನಿನ್ನಲ್ಲಿರುವ ಪತ್ರಗಳನ್ನು ಮಾತ್ರ ಆರಿಗೂ ತೋರಿಸಬೇಡ. ಹಣಕಾಸು ಇರುವುದೆಂದು ನೀನು ಗರ್ವದಿಂದ ಒಳ್ಳೆಯ ಬಟ್ಟೆಯನ್ನಾಗಲಿ, ಒಳ್ಳೆಯ ಆಭರಣಗಳನ್ನಾಗಲಿ ಎಂದಿಗೂ ಧರಿಸಬೇಡ. ಅದರಿಂದ ನಿನಗೆ ಮುಂದೆ ತುಂಬಾ ತೊಂದರೆಯುಂಟು. ನೀನು ಆರ ಮಾತಿಗೂ ಬೆರಗಾಗಬೇಡ. ನೀನು ಆರ ಆಶ್ರಯದಲ್ಲಿದ್ದರೂ ನಿನ್ನ ಬುದ್ಧಿಯನ್ನು ಮಾತ್ರ ನಿನ್ನಲ್ಲಿಯೇ ಇಟ್ಟುಕೊಂಡಿರು. ನನ್ನ ಅವಸ್ಥೆಯೇನೋ ಮುಗಿಯುತ ಬಂದಿತು. ನನಗೆ ಇನ್ನು ಮಾತನಾಡಲು ಶಕ್ತಿಯಿಲ್ಲ. ನಾನು ಹೋಗಿಬರುವೆನು."

ವಿಶ್ವನಾಥನು ಹೀಗೆ ಹೇಳುತೆ ಹೇಳುತೆ ಪರಂಧಾಮುವನ್ನೈದಿದನು. ಇದಾದ ನಂತರದಲ್ಲಿ ಸರಳಸ್ವಭಾವದ ಸರಳಕುಮಾರಿಯು ಏನ ಮಾಡಿದಳು? ಎಲ್ಲಿಗೆ ಹೋದಳು? ಇವಾದಿಯಾದ ಸಂಗತಿಗಳನ್ನು ನಮ್ಮ ಪ್ರಿಯ ಪಾಠಕಮಹಾಶಯರು ಬಲ್ಲವರಾಗಿರುವರು.

ನಾಗೇಂದ್ರ ಭೂಷಣನು ಸರಳಕುಮಾರಿಯನ್ನು ತನ್ನ ಪ್ರಾಣಕ್ಕಿಂತಲೂ ಅಧಿಕವಾಗಿ ಪ್ರೀತಿಸುತ್ತಿದ್ದನು. ಆತನು ಪ್ರೀತಿಯ ಅಧಿಕ್ಯದಿಂದ ಸಮಾಜದ ಆಡಿಕೆಯನ್ನೂ ಲಕ್ಷ್ಯಮಾಡದೆ, ವಿಧವೆಯಾದ ಸರಳೆಯನ್ನು ವಿವಾಹಮಾಡಿ ಕೊಳ್ಳಲು ಸಿದ್ಧನಾಗಿದ್ದನು. ಸರಳೆಯು ಮಾತ್ರ ಆತನನ್ನು ಬೇರೆಯ ದೃಷ್ಟಿ ಯಿಂದ ನೋಡುತ್ತಿದ್ದಳು. ಸರಳೆಯು ನಾಗೇಂದ್ರನನ್ನು ತನ್ನ ಅಣ್ಣನಿಗಿಂ ತಲೂ ಹೆಚ್ಚಾಗಿ ಪ್ರೀತಿಸುತ್ತಾ ಆತನ ಸಾಹಾಯ್ಯವನ್ನು ಸ್ವೀಕರಿಸುತ್ತಿದ್ದಳು. ಅನಾಥೆಯಾದ ಸರಳೆಯು ತಿನ್ನುವುದಕ್ಕೆ ಮಾರ್ಗವಿಲ್ಲದಿರುವಾಗ, ಮಧುಸೂದನನ ಮನೆಯಲ್ಲಿ ಅಡುಗೆಗೆ ಸಹಾಯೆಯಾಗಿದ್ದಳು. ಹೀಗಿರಲೊಂದುದಿನ ಮಧು ಸೂದನನು ಗೋಪ್ಯವಾಗಿ ಆಕೆಯನ್ನು ಇದಿರ್ಗೊಂಡು ಆಕೆಯ ಸರ್ವಸ್ವವಾದ ಪಾತಿವ್ರತ್ಯವೆಂಬ ಮಹಾರತ್ನವನ್ನು ಅಪಹರಿಸುವುದರಲ್ಲಿದ್ದನು. ಅಷ್ಟುಮಟ್ಟಿನ ಅತ್ಯಾಚಾರವನ್ನು ಸಹಿಸದೆ, ಪರಾಧೀನದ ಜೀವನಕ್ಕಿಂತಲೂ ತಿರಿದು ತಿನ್ನುವುದೆ ಲೇಸೆಂದು ತಿಳಿದು ಆಕೆಯು ಆನೀಚನಾದ ಮಧುಸೂದನನ ಮನೆಯನ್ನು ಆ ಕ್ಷಣವೇ ತ್ಯಾಗಮಾಡಿಬಿಟ್ಟಳು.

ಮಧುಸೂದನನು ಸರಳೆಯನ್ನು ತನ್ನ ಬಲೆಗೆ ಸಿಲುಕಿಸಿಕೊಳ್ಳುವುದಕ್ಕಾಗಿ ನಡೆಯಿಸಿದ ಸಂಧಾನಗಳನ್ನು ಕುರಿತು ಗ್ರಂಥಗಳ ಮೇಲೆ ಗ್ರಂಥಗಳನ್ನು ಬರೆ ದರೂ ಸಾಲದು. ಆವ ಪತ್ರಗಳನ್ನು ಗಂಡನು ಬಹಿರಂಗಮಾಡಬೇಡವೆಂದು ಹೇಳಿದ್ದನೋ ಅವೆಲ್ಲವನ್ನೂ ಸರಳೆಯು ಗೋಪ್ಯವಾಗಿಯೇ ಕಾಪಿಟ್ಟುಕೊಂಡು ಬಂದಳು. ಸ್ವಾಮಿಯ ಆಜ್ಞೆಯನ್ನು ತಾನು ಎಂದಿಗೂ ಉಲ್ಲಂಘನ ಮಾಡಿದವ ಳಲ್ಲ. ಈಕೆಯ ಕೈಯಲ್ಲಿದ್ದ ಪತ್ರಗಳು ಮಧುಸೂದನನ ವಶವಾಗಿದ್ದಿದ್ದರೆ, ಏನಾಗುತ್ತಿತ್ತೋ ಅದನ್ನು ಕುರಿತು ಈಗ ನಾವು ತಿಳಿಸಬೇಕಾದುದಿಲ್ಲ. ಮಧು ಸೂದನನು ಈಕೆಯ ಕೈಯಿಂದ ಆವುದೂ ಬಾರದಿರಲು, ಈಕೆಯ ಪಾತಿವ್ರತ್ಯವ ನ್ನಾದರೂ ಭಂಗಮಾಡಿ ಇವಳಲ್ಲಿದ್ದ ಪತ್ರಗಳನ್ನು ಅಪಹರಿಸಬೇಕೆಂದು ದುರಾ ಲೋಚನೆ ಮಾಡಿದ್ದನು ; ಆದರೆ ಆವುದೂ ಸಾಗದೇ ಹೋಯಿತು.

ಸರಳೆಯ ತಂದೆಯಾದ ಶಿವಶಂಕರಶಾಸ್ತ್ರಿಯು ಇದಕ್ಕೆ ಕೊಂಚ ಕಾಲ ಮುಂಚೆ ಸತ್ತುಹೋಗಿದ್ದನು. ಆತನ ಅವಸ್ಥೆಯು ಶೋಚನೀಯವಾಗಿದ್ದಿತು. ದಿನ ದಬ್ಬುವುದೇ ಆತನಿಗೆ ಬಹಳ ಕಷ್ಟವಾಗಿದ್ದಿತು. ಸರಳೆಯು ಕೊಂಚಮಟ್ಟಿ

ಗಾದರೂ ಸಾಹಾಯ್ಯ ಮಾಡದಿದ್ದರೆ ಆತನು ಏಕಭುಕ್ತ, ಧಾರಣಪಾರಣ, ವಿಷ್ಣು ಪಂಚಕ, ಪಕ್ಷೋಪವಾಸ, ಮಾಸೋಪವಾಸ, ಭೀಷ್ಮಪಂಚಕ, ಪ್ರಾಯೋಪವೇಶ ಮುಂತಾದ ವ್ರತಗಳನ್ನು ಕೈಕೊಳ್ಳಬೇಕಾಗಿರುತ್ತಿತ್ತು. ಶಿವಶಂಕರನು ಮಡಿದ ಕೂಡಲೆ ಸರಳೆಯ ತಾಯಿಗೆ ಇನ್ನೂ ಕಷ್ಟಕ್ಕಿಟ್ಟಿತು. ಸರಳೆಯು ತನ್ನ ಕೈಯ ಲ್ಲಿದ್ದ ಅಲ್ಪ ಸ್ವಲ್ಪವು ವೆಚ್ಚವಾಗುವ ವರೆಗೂ ತನ್ನ ತಾಯಿಯನ್ನು ರಕ್ಷಿಸು ತ್ತಿದ್ದಳು. ತನ್ನಿಂದ ತನ್ನ ತಾಯಿಗೆ ತೊಂದರೆಯಾಗಬಾರದೆಂಬುದೇ ಅವಳ ಪರಮೋದ್ದೇಶವಾಗಿದ್ದಿತು. ಆದಕಾರಣ ಆಕೆಯು ತನ್ನ ಗಂಡನ ಮನೆಯಲ್ಲಿಯೇ ಇರುತ್ತಿದ್ದಳು. ಮಧುಸೂದನನು ಮನೆಯನ್ನು ಕಸಿದುಕೊಳ್ಳಲು, ಅದರ ಹತ್ತಿ ರದಲ್ಲಿಯೇ ಬೇರೊಂದು ಮನೆಯನ್ನು ಬಾಡಿಗೆಗೆ ತೆಗೆದುಕೊಂಡು ವಾಸವಾಗಿರು ತ್ತಿದ್ದನು. ಕೈಯಲ್ಲಿದ್ದುದೆಲ್ಲಾ ವೆಚ್ಚವಾಗಿ ಹೋದ ಮೇಲೆ ಜೀವನಕ್ಕೆ ಏನೂ ಮಾರ್ಗವಿಲ್ಲದಿರಲು, ಸರಳೆಯು ದಾಸಿಯ ವೃತ್ತಿಯನ್ನು ಅವಲಂಬಿಸಿ ಹೊಟ್ಟೆ ಹೊರೆಯಬೇಕಾಗಿ ಬಂದು ಸೇರಿತು. ಆಕೆಯು ಮೊದಲು ಮಧುಸೂದನನಲ್ಲಿಯೇ ಕೆಲಸಕ್ಕೆ ಸೇರಿದಳು. ಇದಕ್ಕೆ ಅವಳ ಕಾರಣವೇನೆಂದರೆ:—ಒಂದು ದಿನವಲ್ಲ ಒಂದು ದಿನ ತನ್ನ ಗಂಡನಿಗೆ ಮಿತ್ರನಾಗಿ ತನ್ನ ಗಂಡನಿಂದ ಅಡಿಗಡಿಗೂ ಪ್ರಯೋಜನವನ್ನು ಪಡೆಯುತ್ತಿದ್ದ ಮಧುಸೂದನನು ತನ್ನ ವಿಷಯದಲ್ಲಿ ಕನಿಕರ ಪಟ್ಟವನಾಗಿ ತನಗೂ ತನ್ನ ತಾಯಿಗೂ ಜೀವನಾಂಶವನ್ನೇನಾದರೂ ಕೊಡ ಬಹುದೆಂಬ ಭರವಸೆಯಿಂದ ಆಕೆಯು ಮಾನವನ್ನಾದರೂ ದೂರಮಾಡಿ ಮಧು ಸೂದನನ ಮನೆಯಲ್ಲಿ ಪರಿಚಾರಿಕೆಯಾದಳು. ಕೃತಘ್ನನಾಗಿಯೂ ಸ್ವಾರ್ಥಪರ ನಾಗಿಯೂ ಇದ್ದ ಮಧುಸೂದನನು ಆಕೆಯ ವಿಷಯದಲ್ಲಿ ಕಿಂಚತ್ತೂ ಮನಗರ ಗದವನಾಗಿ ಅವಳಲ್ಲಿರತಕ್ಕ ಸಮಸ್ತವನ್ನೂ ಅಪಹರಿಸಲೆಣಿಸಿದನು. ಅವಳ ಮನೆಯನ್ನಪಹರಿಸಿದುದಾಯಿತು; ಅವಳಲ್ಲಿ ಒಂದು ಅಮೂಲ್ಯವಾದ ಆಭರಣ ವಿದ್ದಿತು. ಅದನ್ನೂ ಅಪಹರಿಸುವುದಕ್ಕೆ ಯತ್ನಮಾಡಿದನು, ಆದರೆ ಅದು ಮಾತ್ರ ಸಾಗಲಿಲ್ಲ.

ಸರಳೆಯ ಮನೆ ಮತ್ತು ಆಭರಣಗಳು ಇನ್ನೂ ಮಾರಾಟಕ್ಕೆ ಬಿದ್ದಿರಲಿಲ್ಲ. ಮಧುಸೂದನನಿಗೆ ಹಣದ ತಗಾದೆ ಯಾವುದೂ ಇರಲಿಲ್ಲವಾಗಿ ಮನೇಕಡೆ ದೃಷ್ಟಿ ಬಿದ್ದಿರಲಿಲ್ಲ. ತತ್ತ್ವವನ್ನು ವಿಚಾರಿಸಲಾಗಿ ವಿಶ್ವನಾಥನು ಆರಿಗೂ ಸಾಲಕೊಡ ಬೇಕಾದುದಿರಲಿಲ್ಲ. ಸರಳೆಗೆ ಆ ವಿಷಯ ಚೆನ್ನಾಗಿ ತಿಳಿಯದು. ಭರತಖಂಡದ ಮಹಿಳೆಯರು ಸಂಸಾರದಲ್ಲಿ ಎಷ್ಟರಮಟ್ಟಿನ ಭಾರವನ್ನು ವಹಿಸಿರುವರೋ ನಮ್ಮ ಸರಳಕುಮಾರಿಯೂ ಅಷ್ಟೇ ಭಾರವನ್ನು ವಹಿಸಿದ್ದಳು. ಅವಳ ಅಭಿಪ್ರಾಯ ವಾದರೋ ತನ್ನ ಸ್ವಾಮಿಯು ಸಾಲಗಾರನಾಗಿ ಸತ್ತರೆ ಅವನಿಗೆ ಸಲ್ಲೋಕಪ್ರಾಪ್ತಿ

ಯಿಲ್ಲ; ತಾನು ಹೊಟ್ಟೆಗಿಲ್ಲದೇ ಸತ್ತರೂ ತನ್ನ ಸ್ವಾಮಿಗೆ ಅನಿಷ್ಟವಾಗಕೂಡ ದೆಂಬುದಾಗಿದ್ದಿತು.

ಸರಳಕುಮಾರಿಯು ಮಧುಸೂದನನ ಮನೆಯನ್ನು ತ್ಯಾಗಮಾಡಿ ತಾಯಿಯ ಮನೆಗೆ ಬಂದಳು. ಅಲ್ಲಿ ಇಬ್ಬರೂ ಹೊಟ್ಟೆಗೆ ಮಾರ್ಗವಿಲ್ಲದೆ, ಮನೆಯಲ್ಲಿದ್ದ ಪಾತ್ರೆ ಪದಾರ್ಥಗಳನ್ನು ಒಂದೊಂದಾಗಿ ಮಾರಿ ಬಂದುದರಲ್ಲಿ ದಿನಗಳನ್ನು ಕಳೆಯುತ್ತ ಬಂದರು. ಕುಳಿತು ತಿನ್ನುವುದಾದರೆ ಕುಡಕೇ ಹಣ ಸಾಲದು. ಕೊನೆಗೆ ತಂದೆಯ ಆಸ್ತಿಯಲ್ಲಿ ಉಳಿದಿದ್ದ ಮನೆಯೂ ಮಾರಿಹೋಯಿತು. ಅನಂತರ ಇರುವುದಕ್ಕೂ ಸ್ಥಳವಿಲ್ಲದೆ, ತಾಯಿಮಕ್ಕಳಿಬ್ಬರೂ ಸುಂಕನ ಹಳ್ಳಿಯ ಹತ್ತಿರ ಒಂದು ಹಳ್ಳಿಯಲ್ಲಿ ವಾಸಮಾಡತೊಡಗಿದರು.

ಈ ಸಮಯದಲ್ಲಿ ಅವರಿಗೆ ನಾಗೇಂದ್ರಭೂಷಣನೊಡನೆ ಪರಿಚಯವೇರ್ಪಟ್ಟಿತು. ಆ ಮಹಾಶಯನೇ ಅನಾಥರಾದ ಹೆಂಗುಸರಿಬ್ಬರನ್ನೂ ಅನ್ನಾಭಾವ ದಿಂದುದ್ಧಾರಮಾಡಿ ಕೊಂಚ ದಿನದ ಮಟ್ಟಿಗೆ ಕಾಪಿಟ್ಟುಕೊಂಡು ಬಂದನು. ಈ ಸಂಬಂಧವಾದ ವಿಷಯಗಳೆಲ್ಲವೂ ಆತನು ಕೊಟ್ಟಿರುವ ಹೇಳಿಕೆಯಿಂದ ತಿಳಿದು ಬರುವುದು.

ನಾಗೇಂದ್ರಭೂಷಣನು ಸರಳೆಯ ಆಸ್ತಿಯನ್ನು ಪುನರುದ್ಧಾರ ಮಾಡು ವುದಕ್ಕಾಗಿ ಬಹಳವಾಗಿ ಯತ್ನಮಾಡತೊಡಗಿದನು. ಆ ಸಮಯದಲ್ಲಿಯೇ ಕೊಲೆ ಯುಂಟಾಯಿತು. ನಾಗೇಂದ್ರನ ಬುದ್ಧಿಯು ಸಾಮಾನ್ಯವಾಗಿದ್ದುದರಿಂದ ಕಳೆದು ಹೋಗಿದ್ದ ಆಸ್ತಿಯನ್ನು ಮತ್ತೆ ಸಂಪಾದಿಸಿ ಕೊಡುವುದು ಆತನಿಂದ ಸಾಧ್ಯವಾಗಿ ಕಂಡುಬರಲಿಲ್ಲ, ಆದರೆ ಆತನ ಹೃದಯದಲ್ಲಿ ಮತ್ಯಾವ ದುರಭಿಸಂಧಿಯೂ ಇರ ಲಿಲ್ಲವಾದುದರಿಂದ ಈಗಿನ ಕಾಲಕ್ಕೆ ಆತನೇ ಧನ್ಯನೆಂದು ಹೇಳಬೇಕು. ಆತನು ಸರಳೆಯನ್ನು ಪ್ರೀತಿಸುತ್ತಿದ್ದುದು ನಿಜವಾದರೂ ಒಂದು ದಿನವೂ ಆತನು ಸರಳೆಯ ಮೇಲೆ ಕೈಹಾಕಿದವನಲ್ಲ. ಇದಲ್ಲದೆ ಕೇವಲ ಸ್ವಾರ್ಥತೆಯಿಂದ ಕೆಲಸ ಮಾಡಲೂ ಆತನಿಗೆ ಧೈರ್ಯವೂ ಇರಲಿಲ್ಲ. ಆತನಿಗೆ ವಿಧವಾ ವಿವಾಹ ಮಾಡಿಕೊಳ್ಳಬೇಕೆಂಬ ಆಸೆಯಿದ್ದಿತೇ ಹೊರತು ತತ್ಕಾಲಸುಖಕ್ಕಾಗಿ ಪರಸ್ತ್ರೀಯನ್ನು ಕೆಡಿಸಬೇಕೆಂಬ ದುರಾಸೆಯು ಆತನಿಗಿರಲಿಲ್ಲ. ಆತನು ಆಕೆಗಾಗಿ ಇಷ್ಟು ಶ್ರಮಪಡುತ್ತಿದ್ದುದು ಆಕೆಯ ಗುಣಕ್ಕಾಗಿಯೇ ಹೊರತು ಆಕೆಯ ಹಣಕ್ಕಾಗಲ್ಲ.

ಮಧುಸೂದನನು ಸರಳಕುಮಾರಿಯ ಹತ್ತಿರದಿಂದ ಅವಳಲ್ಲಿದ್ದ ಸಮಸ್ತ ಷ್ಟಾದ ಪತ್ರಗಳೆಲ್ಲವನ್ನೂ ಅಪಹರಿಸಬೇಕೆಂದು ಎಷ್ಟೋ ಪ್ರಯತ್ನಮಾಡಿ ನೋಡಿ ದನು. ಆವುದೂ ಸಾಗದಿರಲು, ತನಗೆ ಬಂದಷ್ಟೇ ಸಾಕೆಂದು ಸುಮ್ಮನಾಗಿಬಿಟ್ಟನು.

ಅನೇಕ ಜನರಿಗೆ ಮೋಸಮಾಡಿ ತಾನು ಹಣಗಾರನೆನಿಸಿಕೊಂಡಿರುವನೆಂದೂ, ಇನ್ನು ಮುಂದೆ ತನ್ನ ಮೋಸಕ್ಕೆ ಜನಗಳು ಒಳಗಾಗಲಾರರೆಂದೂ, ತಾನು ಇಲ್ಲದ ಬುದ್ಧಿಮಂತಿಕೆ ಮಾಡುವುದಾದರೆ ಜನಗಳು ತನಗೆ ಸರಿಯಾದ ಸೇವೆಮಾಡುವರೆಂದೂ, ಮಧುಸೂದನನು ತಿಳಿದು ಸ್ವಾರ್ಥರಕ್ಷಣೆಯಲ್ಲಿಯೂ, ಪರಾರ್ಥ ಹರಣೆಯಲ್ಲಿಯೂ ಆರಿಗೂ ಊಹಿಸಲಸದಳವಾದ ನಾನೋಪಾಯಗಳನ್ನು ಹುಡುಕುವುದರಲ್ಲಿಯೇ ಕಾಲವನ್ನು ಕಳೆಯಲಾರಂಭಮಾಡಿದನು. ತನ್ನ ಬುಡವನ್ನು ಭದ್ರವಾಗಿ ಮಾಡಿಕೊಳ್ಳುವುದಕ್ಕಾಗಿ ತನ್ನ ಎರಡನೆಯ ಸೋದರಳಿಯನಾದ ಶಿವಕುಮಾರನನ್ನು ಸಾಕಮಗನನ್ನಾಗಿ ಮಾಡಿಕೊಂಡನು ; ಮೊದಲನೆಯ ಸೋದರಳಿಯನಾದ ಚಂದ್ರಶೇಖರನನ್ನು ಕಂಡರೆ ಅವನಿಗೆ ಸರಿಬರುತ್ತಿರಲಿಲ್ಲ.

ಆವ ರಾತ್ರಿಯಲ್ಲಿ ಸರಳೆಯು ಹತಳಾದಳೋ, ಅದೇ ರಾತ್ರಿಯಲ್ಲಿಯೇ ಮಧುಸೂದನನೂ ಈ ಲೋಕವನ್ನು ತ್ಯಾಗಮಾಡಿದನು. ಸರಳೆಯು ಸಾಯುವುದಕ್ಕೆ ಮುಂಚೆ ಮಧುಸೂದನನನ್ನು ಕಂಡಿದ್ದಳೆಂಬುದಕ್ಕೆ ತಕ್ಕ ಪ್ರಮಾಣವು ಸಿಕ್ಕುವುದು. ಮಧುಸೂದನನ ದರ್ಶನದಿಂದ ಏನೂ ಪ್ರಯೋಜನವಾಗಲಿಲ್ಲವೆಂದು ಸರಳೆಯು ನಿರಾಶೆಯಾಗಿ ಹಿಂದಿರುಗಿ ಬರುತ್ತಿರುವಾಗ ಗುರುದಾಸನು ಭ್ರಾಂತಿಯಿಂದ ಆಕೆಯನ್ನು ಕೊಂದನು.

ಮಧುಸೂದನನು ತಾನು ಸಾಯುವುದಕ್ಕೆ ಮುಂಚೆ ಮಾಡಿದ್ದ ಉಯಿಲಿನ ಪ್ರತಿಯೊಂದನ್ನು ಅವನ ಕಡೆ ವಕೀಲನ ಬಳಿ ನೋಡಬಹುದು. ಅದರಲ್ಲಿ ಬರೆದಿರುವುದು—ನನ್ನ ಅನಂತರ ನನ್ನ ಆಸ್ತಿಯಲ್ಲಿ ಹನ್ನೆರಡಾಣೆಯ ಭಾಗವು ನನ್ನ ಮಗಳಿಗೂ, ಉಳಿದ ನಾಲ್ಕಾಣೆಯ ಭಾಗವು ಶಿವಕುಮಾರನಿಗೂ ಸಲ್ಲತಕ್ಕದ್ದು. ಚಂದ್ರ ಶೇಖರನು ಈ ಉಯಿಲಿನ ವಿಷಯವನ್ನು ಹೇಗೋ ಕಂಡು ಹಿಡಿದು, ಆ ಆಸ್ತಿಯಲ್ಲಿ ನನಗೇನೂ ಇಲ್ಲವೆಂದು ಸುಳ್ಳು ಉಯಿಲು ಒಂದನ್ನು ಸೃಷ್ಟಿಮಾಡಿಸಿದನು. ಸುಳ್ಳು ಉಯಿಲನ್ನು ಬರೆದವನು ತ್ರಿಪುರಾರಿ. ಕಾಳೀಕಿಶೋರನು ಉಯಿಲನ ಒಕ್ಕಣೆಯನ್ನು ಪೂರ್ವಾಪರ ವಿರೋಧ ವಿಲ್ಲದ ಹಾಗೆ ಬರೆದುಕೊಟ್ಟನು.

ಚಂದ್ರಶೇಖರನ ಅಪ್ಪಣೆಯ ಪ್ರಕಾರ ಹರಿಯು, ಭುವನೇಶ್ವರಿಯ ಗುಡಿಯಲ್ಲಿ ಮಧುಸೂದನನು ಒಬ್ಬನೇ ಇರುವುದನ್ನು ನೋಡಿ, ತನ್ನ ಕೆಲಸಕ್ಕೆ ಸರಿಯಾದ ಕಾಲವು ಬಂದೊದಗಿದೆಯೆಂದೆಣಿಸಿ, ದೇವತೆಯ ಸನ್ನಿಧಿಯಲ್ಲಿಯೇ ನರಬಲಿಯನ್ನರ್ಪಿಸಿ, ಅಲ್ಲಿ ನಿಲ್ಲದೇ ಆಕ್ಷಣವೇ ಎಲ್ಲಿಯೋ ಮಾಯವಾಗಿ ಬಿಟ್ಟನು. ಹರಿಯು ದೇವಸ್ಥಾನದಲ್ಲಿ ಈ ಕೆಲಸಮಾಡುತ್ತಿರುವಾಗ ಚಂದ್ರಶೇಖರನು ಮಧುಸೂದನನ ಕೋಣೆಯೊಳಗಿದ್ದು ನಿಜವಾದ ಉಯಿಲನ್ನು ಕದ್ದು ಅದರ ಸ್ಥಾನದಲ್ಲಿ

ಸುಳ್ಳುಯಿಲನ್ನು ಇರಿಸಿ, ಮುಂದೇನು ಸಂಗತಿ ನಡೆಯುವುದೋ ನೋಡೋಣ ವೆಂದು ಶಿವಕುಮಾರನ ಕೋಣೆಯಲ್ಲಿಯೇ ಇದ್ದನು. ಅದೇ ರಾತ್ರಿ ವಿಪರೀತವಾದ ಮಳೆ ಬೀಳುತ್ತಿದ್ದಿತು. ಆರೂ ತಮ್ಮ ತಮ್ಮ ಸ್ಥಳಗಳಿಂದ ಹೊರಗೆ ಹೊರಡಲು ಸಾಹಸ ಪರರಾಗುತ್ತಿರಲಿಲ್ಲ. ಚಂದ್ರಶೇಖರನಿಗೆ ಇದೊಂದು ಒಳ್ಳೆಯ ನೆಪವೇ ಆಗಿದ್ದಿತು. ಮಳೆಯು ಧಾರಾಕಾರವಾಗಿ ಸುರಿಯುತ್ತಿರಲು, ಸರಳೆ ಬಂದುದನ್ನೂ ಹೋದುದನ್ನೂ, ಹರಿಯು ಅಲ್ಲಿ ಹೊಂಚುಹಾಕುತ್ತಿದ್ದುದನ್ನೂ ಆರೂ ಕಾಣುವುದಕ್ಕೆ ಅವಕಾಶವೇ ಆಗಲಿಲ್ಲ.

ಸರಳಕುಮಾರಿಯ ಗಂಡನ ಮನೆಯು ಇನ್ನು ಮಾರಿ ಹೋಗಿರಲಿಲ್ಲ. ಮಧು ಸೂದನನು ಸುಳ್ಳುಪತ್ರವನ್ನು ಬರೆದು ಆ ಮನೆಯನ್ನು ತಾನೇ ಇಟ್ಟುಕೊಂಡಿ ದ್ದನು. ನ್ಯಾಯಸ್ಥಾನದಲ್ಲಿ ವ್ಯವಹಾರಮಾಡಿದುದರ ಮೇಲೆ ಸರಳಕುಮಾರಿಯ ಕಡೆ ವ್ಯವಹಾರವು ಕೊನೆಗಂಡು ಮನೆ, ೬೦ ಲಕ್ಷರೂಪಾಯಿಗಳೂ ಕೈಸೇರಿದುವು. ಉಳಿದ ೨೦ ಲಕ್ಷರೂಪಾಯಿಗಳಿಗೆ ಸರಿಯಾದ ಆವ ಆಧಾರವೂ ದೊರೆಯಲಿಲ್ಲವಾಗಿ, ಅವು ಮಾತ್ರ ಹೋದವು.

ಈ ಸಮಸ್ತ ಅನರ್ಥಗಳಿಗೂ ಲಲಿತೆಯೆಂಬ ಸೂಳೆಯೇ ಮೂಲಕಾರಣವು. ಅವಳೊಬ್ಬಳು ಈ ವಿಷಯವೆಲ್ಲವನ್ನೂ ಚೆನ್ನಾಗಿ ಬಲ್ಲಳು. ಅವಳ ಮನೆಯಲ್ಲಿಯೇ ಸುಳ್ಳುಯಿಲು ನಿರ್ಮಾಣವಾಯಿತು. ಅವಳು ಚಂದ್ರಶೇಖರನ ಸೂಳೆ. ಈ ಸಂದರ್ಭದಲ್ಲಿ ತನಗೇನಾದರೂ ಹಣಕಾಸು ಬರಬಹುದೆಂಬ ಭರವಸೆಯಿಂದ ಅವಳು ಈ ವಿಷಯವನ್ನು ಕಂಡೂ ಕಾಣದ ಹಾಗಿರುತ್ತಿದ್ದಳು. ಆಕೆಯು ತನ್ನ ಕೈಯಿಂದ ಆವ ಕೆಟ್ಟ ಕೆಲಸವನ್ನೂ ಮಾಡಿದವಳಲ್ಲವಾದರೂ ಕೆಟ್ಟ ಕೆಲಸ ಮಾಡ ತಕ್ಕವರಿಗೆ ಆಶ್ರಯವನ್ನು ಕೊಡುತ್ತಿದ್ದಳು. ಆದುದರಿಂದ ಚಂದ್ರಶೇಖರನೂ ಅವನ ಸೇವಕರೂ ಎಲ್ಲರೂ ಅವಳಲ್ಲಿಯೇ ಸೇರಿಕೊಂಡು ಆವ ದುರಾಲೋಚನೆ ಯನ್ನಾದರೂ ಮಾಡುತ್ತಿದ್ದರು.

ಗುರುದಾಸನ ಹೆಂಡಿತಿ ಪರಮಸುಂದರಿ. ಅವಳ ಸ್ವಭಾವವು ಮಾತ್ರ ಅವಳ ರೂಪದಂತಿರಲಿಲ್ಲ. ಗಂಡನು ಮನೆಯಲ್ಲಿದ್ದರೆ ಆಕೆಯು ಮಹಾಪತಿವ್ರತೆಯಂತೆ ನಟಿಸುವಳು, ಆತನು ಹೊಟ್ಟೆಯ ಪಾಡಿಗಾಗಿ ಕೊಂಚ ಕಣ್ಮರೆಯಾದನೆಂದರಾಯ್ತು, ಎಲ್ಲಿಯೋ ಅಡಗಿಕೊಂಡಿರುತ್ತಿದ್ದ ವಿಟಪುರುಷರು ಆ ಮನೆಯೊಳಗೆ ಪ್ರವೇಶಮಾಡು ವರು. ಆಗ ಆಕೆಯು ಪ್ರತ್ಯಕ್ಷವಾದ ಜಾತಿಯ ಸೂಳೆಯೇ ಆಗಿರುವಳು. ಆಕೆಯ ಅನೇಕ ಉಪಪತಿಗಳಲ್ಲಿ ಚಂದ್ರಶೇಖರನು ಒಬ್ಬನಾಗಿದ್ದನು. ಒಂದು ದಿನ ಹೊರಗೆ ಹೋಗಿದ್ದ ಗುರುದಾಸನು ಆ ಕಾಲದಲ್ಲಿ ಮನೆಗೆ ಬಂದು ನೋಡಲಾಗಿ

ಮನೆಯ ತುಂಬಾ ವಿಟಪುರುಷರು ತುಂಬಿಕೊಂಡು ಸರಸಸಲ್ಲಾಪಗಳಲ್ಲಿ ಮಗ್ನ ರಾಗಿದ್ದರು. ಇದನ್ನು ಗುರುದಾಸನು ನೋಡಿ ಮೇಲೆ ಮೇಲೆ ಉಕ್ಕಿ ಬರುವ ವ್ಯಸನವೇನು ಕೋಪವೇನು ಇವುಗಳಿಂದ ಪರವಶನಾಗಿ ತನ್ನ ಹೆಂಡಿತಿಯನ್ನು ಶೀಘ್ರದಲ್ಲಿಯೇ ಕೊಲ್ಲುವುದಾಗಿ ಪ್ರತಿಜ್ಞೆಮಾಡಿಕೊಂಡನು. ಪ್ರತಿಜ್ಞೆಯ ಫಲವು ಆವ ರೀತಿಯಲ್ಲಿ ಪರಿಣಮಿಸಿತೆಂಬುದು ವಾಚಕರಿಗೆ ಗೊತ್ತೇ ಇರುವುದು.

ಚಂದ್ರಶೇಖರನ ಸುಳ್ಳುಯಿಲಿಗೆ ಸಾಕ್ಷಿಹಾಕಿದ ಇಬ್ಬರು ಹಣದ ಆಸೆಯಿಂದ ಹಾಗೆ ಮಾಡಿದರೇ ಹೊರತು ಮತ್ತಾವ ಸಂಗತಿಯೂ ಅವರಿಗೆ ತಿಳಿಯದು.

ಗುರುದಾಸನು ಕತ್ತಲೆಯಲ್ಲಿ ತನ್ನ ಹೆಂಡಿತಿಯೆಂಬ ಭ್ರಾಂತಿಯಿಂದ ಸರಳೆ ಯನ್ನು ಕೊಂದನು. ಗುರುದಾಸನ ಹೆಂಡಿತಿಯು ಆ ರಾತ್ರಿಯಲ್ಲಿ ಮಧುಸೂದನನ ಮನೆಯಲ್ಲಿ ಉಪಪತಿಗಳನ್ನು ಹುಡುಕಿಕೊಂಡು ಬಂದಿರುವಲ್ಲಿ, ಗಂಡನು ಕಂಡು ಅಟ್ಟಿಸಿಕೊಂಡು ಬರಲು ಆಕೆಯು ಆ ಕಗ್ಗತ್ತಲೆಯಲ್ಲಿ ಎಲ್ಲಿಯೋ ಮಾಯವಾದಳು. ಅವಳು ಮಾಯವಾದುದು ಕೋಪಾಂಧನಾದ ಗಂಡನಿಗೆ ಗೊತ್ತಾಗಲಿಲ್ಲ. ಆ ಸಮ ಯದಲ್ಲಿ ಮಳೆಯ ಬಾಧೆಯನ್ನು ತಡೆಯಲಾರದೆ ಸರಳ ಕುಮಾರಿಯು ಆಶ್ರಯ ವನ್ನು ಹುಡುಕುತಿದ್ದಳು. ಅವಳನ್ನೇ ತನ್ನ ಹೆಂಡಿತಿ ಯೆಂದು ತಿಳಿದು, ಗುರು ದಾಸನು ಕೊಲೆ ಮಾಡಿಬಿಟ್ಟನು. ಆ ಮೇಲೆ ತನ್ನ ಹೆಂಡಿತಿಯು ಬದುಕಿರುವ ವರ್ತಮಾನವು ತಿಳಿದು ಬಂದು ದಿಕ್ಕುತೋರದವನಾಗಿ ಕಾಳೀಕಿಶೋರನ ಹತ್ತಿರ ಸಲಹೆಯನ್ನು ತೆಗೆದುಕೊಳ್ಳುವುದಕ್ಕೆ ಬಂದನು. ಗುರುದಾಸನಿಗೂ ಕಾಳೀಕಿಶೋ ರನಿಗೂ ನಡೆದ ಸಂಭಾಷಣೆಯನ್ನು ಇಲ್ಲಿ ಕೊಂಚಮಟ್ಟಿಗೆ ತಿಳಿಸುವೆವು.

ಗುರುದಾಸ—ಸ್ವಾಮಿಾ, ನನ್ನ ಗತಿಯೇನು? ನನ್ನನ್ನು ಗಲ್ಲಿಗೆ ಹಾಕಿ ಬಿಡುವರೇ?

ಕಾಳೀಕಿಶೋರ—ಗಲ್ಲಿಗೆ ಹಾಕಿದರೂ ಹಾಕಬಹುದು; ನೀನು ಕೊಲೆ ಮಾಡಿದುದೇತಕೆ?

ಗುರು—ನಾನು ಕೋಪಾಂಧನಾಗಿದ್ದುದರಿಂದ ನನಗೆ ಆವುದೂ ತೋರ ಲಿಲ್ಲ.

ಕಾಳೀ—ನೀನು ನಿಜವಾಗಿಯೂ ನಿನ್ನ ಹೆಂಡಿತಿಯನ್ನೇ ಕೊಂದಿದ್ದರೆ, ಆಗ ಏನು ಆಗುತ್ತಿತ್ತು?

ಗುರು—ಒಳ್ಳೆಯದೇ ಆಗುತ್ತಿತ್ತು, ನನ್ನ ಮನಸ್ಸಿನ ವ್ಯಥೆಯೂ ಕಡಮೆ ಯಾಗುತ್ತಿತ್ತು. ನಾನು ಆ ಹಾದರಗಿತ್ತಿಯನ್ನು ಕೊಂದು ಗಲ್ಲಿಗೆ ಹೋಗಿದ್ದರೂ ನನಗೆ ವ್ಯಸನವೆಂಬುದೇ ಇರುತ್ತಿರಲಿಲ್ಲ.

ಕಾಳೀ—ಈಗಲೂ ಹಾಗೆಯೇ ಭಾವಿಸಿಕೊಂಡು ಗಲ್ಲಿಗೆ ಹೋಗು. ನೀನು ಕೊಲೆಮಾಡಿಲ್ಲವೇ ?

ಗುರು—ಆದರೆ! ಆರ ದುರ್ಗುಣದಿಂದ ನಾನು ಕೊಲೆ ಮಾಡಬೇಕೆಂದು ಉದ್ಯುಕ್ತನಾದೆನೋ ಆಕೆಯು ಬದುಕಿರುವುದು, ನಾನು ಮಾತ್ರ ಗಲ್ಲಿಗೆ ಹೋಗುವುದು, ನಾನು ಇದನ್ನೆಂದಿಗೂ ಸಹಿಸಲಾರೆನು. ಅದಕ್ಕಾಗಿಯೇ ನಾನು ಎಲ್ಲಿಗಾದರೂ ಓಡಿಹೋಗುವೆನು.

ಕಾಳೀ—ಎಲ್ಲಿಗೆ ಓಡಿಹೋಗುವೆ? ಎಲ್ಲಿಗೆ ಹೋದರೂ ಈ ಭೂಮಿಯನ್ನು ಬಿಟ್ಟು ಬೇರೆ ಹೋಗುವುದಿಲ್ಲವಷ್ಟೆ? ನೀನು ಬದುಕಿರುವುದೊಂದಾದರೆ ಎಲ್ಲಿದ್ದರೂ ಸಿಕ್ಕಿಬೀಳುವೆ.

ಗುರು—ತಾವು ದಯೆಯಿಟ್ಟು ನನಗೊಂದು ಉಪಾಯವನ್ನು ತೋರಿಸಿ ಕೊಡಿ; ನಾನು ಅದರಂತೆಯೇ ನಡೆದು ಕೊಳ್ಳುವೆನು.

ಕಾಳೀಕಿಶೋರನು ಗುರುದಾಸನಿಗೆ ಹೇಳಿಕೊಟ್ಟ ಉಪಾಯವು ಮೊದಲೇ ತಿಳಿಸಲ್ಪಟ್ಟಿರುವುದು.

ನ್ಯಾಯಸ್ಥಾನದ ವ್ಯವಹಾರಕ್ಕೆ ಸಂಬಂಧಪಟ್ಟ ವಾದಿ, ಪ್ರತಿವಾದಿ, ಸಾಕ್ಷಿ ಮೊದಲಾದವರೆಲ್ಲರೂ ಬಂದು ಸೇರಿದ್ದರು. ಪ್ರತಿಯೊಬ್ಬನೂ ತಾನು ಮಾಡಿದುದು ತಪ್ಪೆಂದು ಹೇಳಿಕೆ ಕೊಟ್ಟಿರುವನು. ಚಂದ್ರಶೇಖರನು ಆವ ಹೇಳಿಕೆಯನ್ನು ಕೊಟ್ಟಿರುವನೋ ಅದರ ಸಾರವು ಈ ರೀತಿಯಲ್ಲಿರುವುದು—

“ನಾನು ಮಧುಸೂದನನ ದೊಡ್ಡ ಸೋದರಳಿಯನು. ಮೊದಲು ಮೊದಲು ಸೋದರ ಮಾವನು ನನ್ನನ್ನು ಬಹಳವಾಗಿ ಪ್ರಿತಿಸುತ್ತಿದ್ದನು. ನಾನು ಹುಡುಗನಾಗಿದ್ದಾಗ ಒಂದು ಕೆಟ್ಟಕೆಲಸವನ್ನು ಮಾಡಿದ್ದೆನು. ಅದನ್ನು ನೋಡಿ ಮಾವನು—ನೀನು ಮನೆಹಾಳನಾಗುವೆ, ಎಂದಾದರೊಂದು ದಿನ ನಿನಗೆ ಜೈಲು ಆಗದೇ ಇರದು, ಎಂದು ಹೇಳಿದ್ದನು. ಇಷ್ಟು ದಿವಸದ ಮೇಲೆ ಆತನ ಮಾತು ಫಲಕ್ಕೆ ಬಂದಿತು. ನಮ್ಮ ಮಾವನು ನನ್ನನ್ನು ಯೋಗ್ಯನನ್ನಾಗಿ ಮಾಡಬೇಕೆಂದು ಎಷ್ಟೋ ಹಣ ವೆಚ್ಚಮಾಡಿದನು. ಆವುದರಿಂದಲೂ ಏನೂ ಪ್ರಯೋಜನವಾಗಲಿಲ್ಲ. ನಾನು ದೊಡ್ಡವನಾದ ಮೇಲೆ ವ್ಯಾಪಾರಮಾಡುತ್ತೇನೆಂಬ ನೆಪವನ್ನು ಮಾಡಿಕೊಂಡು ಆತನಿಂದ ಎರಡು ಮೂರು ಸಲ ಹಣವನ್ನು ಕೇಳಿ ತೆಗೆದುಕೊಂಡೆನು. ದುಷ್ಟಸಹವಾಸದಿಂದ ನನ್ನ ಹಣವೆಲ್ಲವೂ ದಾರಿಗೆ ಧಾರಿಯಾಯಿತು.

ಒಂದು ದಿನ ನಮ್ಮ ಮಾವನು ತನ್ನ ಕೋಣೆಯಲ್ಲಿ ಕುಳಿತುಕೊಂಡು, ತನ್ನ ವಕೀಲನಿಂದ ಉಯಿಲನ್ನು ಬರೆಯಿಸುತ್ತಿದ್ದನು. ಆಗ ನಾನು ಮನೆಯಲ್ಲಿ ನಿಂತು ಕೊಂಡು ಎಲ್ಲವನ್ನೂ ನೋಡುತ್ತಿದ್ದೆನು. ಅದರಲ್ಲಿ ನನಗೆ ಆವ ಭಾಗವೂ ಕೊಟ್ಟಿರುವಂತೆ ಕಂಡುಬರಲಿಲ್ಲ. ಅಷ್ಟಕ್ಕಾಗಿಯೇ ನನಗೆ ಕೋಪಬಂದು, ನಾನು ಸುಳ್ಳುಯಿಲನ್ನು ನಿರ್ಮಾಣಮಾಡಿಸಿದೆನು. ನಮ್ಮ ಮಾವನು ನನಗೆ ತನ್ನ ಆಸ್ತಿಯಲ್ಲಿ ನಾಲ್ಕಾಣೆಯ ಭಾಗವನ್ನು ಕೊಡುವುದಾಗಿ ವಾಗ್ದಾನಮಾಡಿರುವನೆಂದು ಹೇಳಿಕೊಳ್ಳುತ್ತ, ನಾನು ಕಂಡಕಂಡವರಲ್ಲೆಲ್ಲಾ ಕೈಸಾಲ ತೆಗೆದು ದುರುಪಯೋಗ ಮಾಡುತ್ತಿದ್ದೆನು. ಉಯಿಲಿನಲ್ಲಿ ನನಗೆ ಆವ ಭಾಗವೂ ಇಲ್ಲದಿರಲು, ಸಾಲಗಾರರ ಬಾಧೆ ಜ್ಞಾಪಕಕ್ಕೆ ಬಂದು, ಸುಳ್ಳುಯಿಲು ಮಾಡಬೇಕೆಂಬ ಆಲೋಚನೆಯು ಹುಟ್ಟಿತು.

ಹರಿಯು ಮಧುಸೂದನನನ್ನು ಕೊಂದಂದಿನಿಂದಲೂ ಹೆದರಿ ಹೆದರಿ ಸಾಯುತ್ತಿದ್ದನು. ಹರಿಯು ಇದಕ್ಕೆ ಮೊದಲು ಆರನ್ನೂ ಆವಾಗಲೂ ಕೊಲೆ ಮಾಡಿದವನಲ್ಲ. ಕೊಲೆ ಮಾಡತಕ್ಕವರ ಸ್ವಭಾವವೇ ಬೇರೆಯಾಗಿರುವುದು. ಹರಿಯು ಕೊಲೆಪಾತಕರ ಸ್ವಭಾವದವನಾಗಿರಲಿಲ್ಲ. ಆದುದರಿಂದ ಅವನು ಭಯದಿಂದ ಇದ್ದವನೂ ಅಲ್ಲ, ಸತ್ತವನೂ ಅಲ್ಲ. ದೂರಹೋದರೆ ಹೆದರಿಕೆಯು ಕಡಮೆಯಾಗಬಹುದೆಂಬ ಆಲೋಚನೆಯಿಂದ ಅವನು ರಾಮನಗರದಲ್ಲಿರಲಾರದೇ ಹೋದನು. ಅದಕ್ಕಾಗಿ ಅವನು ಚಂದ್ರಶೇಖರನನ್ನು ನೋಡಿ, "ಸ್ವಾಮಿಾ, ನಾನು ಈ ಊರಲ್ಲಿ ಇರಲಾರೆನು. ನಾನು ಇಲ್ಲಿರುವುದಾದರೆ, ನನಗೆ ಹುಚ್ಚು ಹಿಡಿದು ಹೋಗುವುದು, ಇದೂ ಅಲ್ಲದೆ ಯಾಮಿಕರು ನನ್ನನ್ನು ಹಿಡಿದುಕೊಂಡು ಹೋಗುವರು," ಎಂದು ಹೇಳಿದನು. ಅದಕ್ಕೆ

ಚಂದ್ರಶೇಖರ—ಹಾಗಾದರೆ ಎಲ್ಲಿಗೆ ಹೋಗುವೆ?

ಹರಿ—ನನಗೆ ಕೊಂಚ ಹಣ ಕೊಡಿ. ನಾನು ಎಲ್ಲಿಗಾದರೂ ಹೋಗಿ ತಲೆ ತಪ್ಪಿಸಿಕೊಂಡಿರುವೆನು. ನನ್ನ ಕಣ್ಣು ಆವ ದಿಕ್ಕನ್ನು ತೋರಿಸುವುದೋ, ನನ್ನ ಕಾಲುಗಳು ಎಲ್ಲಿಗೆ ಎಳೆದುಕೊಂಡು ಹೋಗುವುವೋ, ನಾನು ಅಲ್ಲಿಗಾದರೂ ಹೋಗಿ ನಿರಾಂತಕನಾಗಿರುವೆನೇ ಹೊರತು, ಒಂದು ಕ್ಷಣವೂ ಈ ಕಷ್ಟವನ್ನು ನಾನು ಸಹಿಸಿಕೊಂಡು ಇಲ್ಲಿರಲಾರೆನು.

ಚಂದ್ರ—ನಿನಗೆ ಹೆದರಿಕೆ ಹುಟ್ಟಿದಾಗಲೆ ಹೊರಟು ಹೋಗಬೇಕಾಗಿತ್ತು. ಈಗ ನೀನು ಎಲ್ಲಿಗೆ ಹೋದರೂ ಸಿಕ್ಕಿ ಬೀಳುವೆ. ನಿನ್ನನ್ನು ನೋಡಿದವರೆಲ್ಲರೂ ನಿನ್ನ ವಿಷಯದಲ್ಲಿ ಸಂದೇಹಪಡುವರು.

ಹರಿ—ಸ್ವಾಮಿಾ, ತಮಗೆ ನನ್ನ ಮನದ ಸಂಕಟವು ಗೊತ್ತಾಗುವುದಿಲ್ಲ. ನಾನು ಕೋಪದಿಂದ ಮಾಡಬಾರದ ಕೆಲಸವನ್ನು ಮಾಡಿದೆನು. ನಾನು ಒಂದು ದಿನವಾದರೂ ಮಧುಸೂದನನ ಮನೆಯ ಅನ್ನವನ್ನು ತಿಂದಿರುವೆನು ; ಆತನ ಸೇವೆ ಮಾಡಿರುವೆನು.

ಈ ರೀತಿಯಾದ ಮಾತುಕತೆಗಳಾದಮೇಲೆ, ಚಂದ್ರಶೇಖರನು ಕಾಳೀಕಿಶೋರನೊಡನೆ ಮಾತನಾಡಿ ಹರಿಯನ್ನು ಅವನ ಮನೆಯಲ್ಲಿ ಗೋಪ್ಯವಾಗಿಟ್ಟನು. ಅಲ್ಲಿಂದ ಮುಂದೆ ನಡೆದ ವಿಷಯಗಳನ್ನು ಮತ್ತೆ ಮತ್ತೆ ಎತ್ತಿ ಇಲ್ಲಿ ಬರೆಯಬೇಕಾದ ಆವಶ್ಯಕತೆ ಯಿರುವುದಿಲ್ಲ.

ನ್ಯಾಯಸ್ಥಾನದಲ್ಲಿ ವ್ಯವಹಾರವು ಇತ್ಯರ್ಥವಾಯಿತು. ಸರಳಕುಮಾರಿಗೆ ಮಕ್ಕಳು ಇಲ್ಲದುದರಿಂದ, ಅವಳ ಆಸ್ತಿಯೆಲ್ಲವೂ ಆಕೆಯ ತಾಯಿಗೆ ಹೋಯಿತು. ಆಕೆಯು ತನ್ನ ಆಸ್ತಿಯನ್ನು ನೋಡಿಕೊಳ್ಳುವುದಕ್ಕಾಗಿ ನಾಗೇಂದ್ರಭೂಷಣನನ್ನು ನಿಯಮಿಸಿಕೊಂಡಳು. ತನ್ನ ಆಸ್ತಿಗೆ ಒಬ್ಬ ಉತ್ತರಾಧಿಕಾರಿಯನ್ನು ಮಾಡಿಕೊಂಡು, ತಾನು ಕೆಲವು ಕಾಲ ಬದುಕಿದ್ದು, ಕೊನೆಗೆ ಪರಂಧಾಮವನ್ನೈದಿದಳು. ಆಕೆಯು ಸಾಯುವ ಕಾಲದಲ್ಲಿ ಕೃತಜ್ಞತೆಗೆ ಫಲವಾಗಿ, ನಾಗೇಂದ್ರನಿಗೆ ಒಂದು ಲಕ್ಷರೂಪಾಯಿಗಳನ್ನು ಕೊಟ್ಟಳು.

ನಾಗೇಂದ್ರಭೂಷಣನು ವ್ಯವಹಾರದ ವಿಷಯದಲ್ಲಿ ಏನೂ ತಿಳಿಯದವನಾಗಿದ್ದುದರಿಂದ, ಅವನು ಆ ವಿಷಯದಲ್ಲಿ ಕೈಹಾಕಲಿಲ್ಲ. ಅವನಿಗೆ ಕೊಂಚಮಟ್ಟಿಗಾದರೂ ನ್ಯಾಯ ಗೊತ್ತಿದ್ದಿದ್ದರೆ, ಸರಳೆಯು ಹೊಟ್ಟೆಗಿಲ್ಲದೆ ಶ್ರಮಪಡುತ್ತಲೂ ಇರಲಿಲ್ಲ ; ಅಕಾಲದಲ್ಲಿ ಸಾಯುತ್ತಲೂ ಇರಲಿಲ್ಲ. ನಾವೇನೋ ಹೀಗೆ ಆಲೋಚಿಸುವೆವು. ಅವಳ ಹಣೆಯಲ್ಲಿ ಹಾಗೆ ಬರೆದಿರುವಾಗ, ಅವಳಿಗೆ ನಾವು ಸುಖವನ್ನು ಬಯಸಿದರೆ ಆದೀತೆ ! "ಎಣ್ಣೆ ಬರುವ ಹೊತ್ತಿಗೆ ಕಣ್ಣು ಮುಚಿಕೊಂಡರು" ಎಂಬ ಗಾದೆಯು ಆಕೆಯ ಹಣೆಯಲ್ಲಿ ಬಲವಾಗಿ ಗುರುತು ಮಾಡಲ್ಪಟ್ಟಿತ್ತಾದುದರಿಂದ ಸುಖಬರುವುದಕ್ಕೆ ಮುಂಚೆಯೇ ಆಕೆಯು ದುಃಖದಲ್ಲಿ ಸತ್ತಳು.

ನಾಗೇಂದ್ರಭೂಷಣನು ಹೃದಯವಿದಾರಿಣಿಯಾದ ಈ ಸಂಗತಿಯನ್ನು ತಾನು ಸಾಯುವ ವರೆಗೂ ಮರೆಯಲಿಲ್ಲ. ಸರಳಕುಮಾರಿಯ ಶೋಚನೀಯವಾದ ಅಕಾಲಮೃತ್ಯುವು ನಾಗೇಂದ್ರನನ್ನು ಹಗಲಿರುಳೂ ಅಸುಖಿಯನ್ನಾಗಿ ಮಾಡಿ, ಅವನ ಮೃದುವಾದ ಹೃದಯವನ್ನು ಸುಟ್ಟು ಬೂದಿಮಾಡಿತು.

ಈ ಭಯಂಕರವಾದ ಘಟನೆಯುಳ್ಳ "ನರಬಲಿ" ಎಂಬ ಮಹಾನಾಟಕದಲ್ಲಿ ಚಂದ್ರಶೇಖರನು ಸೂತ್ರಧಾರನಾಗಿದ್ದುಕೊಂಡು, ಆಯಾ ಪಾತ್ರಗಳನ್ನು

ಪಾತ್ರಕ್ಕೆ ತಕ್ಕಂತೆ ಅಭಿನಯಿಸಲು ಏರ್ಪಾಡುಮಾಡಿದ್ದನು. ಅವನ ಇಷ್ಟ ವಿದ್ದಂತೆಯೇ ನಾಟಕವು ಚೆನ್ನಾಗಿ ಆಡಲ್ಪಟ್ಟಿತು. ನಾಟಕವನ್ನು ನೋಡುವು ದಕ್ಕೆ ಬಂದಿದ್ದವರು ನಾಟಕದ ಉದ್ದೇಶವನ್ನೂ, ಅದರಿಂದ ತೋರಿಬರುವ ನೀತಿ ಯನ್ನೂ ವಿಶದವಾಗಿ ತಿಳಿದುಕೊಂಡರು. ನಾಟಕದ ತತ್ವಾರ್ಥವೇನೆಂದರೆ— "ಪಾಪಪುಣ್ಯಗಳಿಗೆ ಪ್ರತಿಕ್ಷಣವೂ ಪರಸ್ಪರ ದ್ವೇಷವಿದ್ದೇ ಇರುವುದು. ಈಲೋಕದಲ್ಲಿ ಬಹುತರವಾಗಿ ಪಾಪವೇ ಜಯಿಸುವುದು. ಹೀಗಿದ್ದರೂ ಕೊನೆಯಲ್ಲಿ ಪುಣ್ಯವು ಜಯಿಸುವುದೇ ಹೊರತು, ಪಾಪಕ್ಕೆ ಜಯವೆಂಬುದು ಇಲ್ಲವೇ ಇಲ್ಲ. ಪಾಪಿಗಳ ಪರಿಣಾಮವು ಬಹುಶೋಚನೀಯವಾಗುವುದು ; ಪಾಪಿಗಳ ಸಹವಾಸ ದಿಂದ ಪುಣ್ಯವಂತರಿಗೂ ಪಾಪಲೇಪವಾಗುವುದು. ಈ ಪರಿವರ್ತನ ಶೀಲವಾದ ಜಡಪ್ರಪಂಚದಲ್ಲಿ ವಿಧಿವಿಲಾಸವು ಹೀಗೆಯೇಸರಿ, ಎಂದು ನಿರ್ಣಯಮಾಡಲು ಆರಿಗೂ ಸಾಧ್ಯವಲ್ಲವು. ತತ್ತ್ವವನ್ನು ಅರಿತವನು ತತ್ತ್ವಾರ್ಥವನ್ನು ಚಿಂತಿಸಲು ಪ್ರಯತ್ನಮಾಡುವನು. ಅಂತಹವನಿಗೆ ಪ್ರಪಂಚದ ವಿಚಿತ್ರವಾದ ನಡವಳಿಕೆಯು ಆಶ್ಚರ್ಯವನ್ನು ಎಂದಿಗೂ ಉಂಟುಮಾಡಲಾರದು."

ಪ್ರಿಯವಾಚಕ ಮಹಾಶಯ ! ಅನಂತಕೋಟಿ ಬ್ರಹ್ಮಾಂಡದಲ್ಲಿ ವಿಧಿಯ ಚಮತ್ಕಾರವಾದ ವಿಲಾಸವು ಊಹಿಸಲಸದಳವಾಗಿರುವುದು. ಸಂಖ್ಯಾತೀತವಾದ ವಿಧಿಯ ಕೆಲಸಗಳಲ್ಲಿ ಅಣುಮಾತ್ರವಾಗಿರುವ ಒಂದಂಶವನ್ನು ಮಾತ್ರ ನಿಮ್ಮಗಳ ಅವಗಾಹನೆಗಾಗಿ ಈ ಚಿಕ್ಕದಾದ ಗ್ರಂಥದಲ್ಲಿ ಯಥಾಶಕ್ತಿ ವರ್ಣಿಸಲು ಯತ್ನ ಮಾಡಿರುವೆನು. ಉದಾರ ಹೃದಯರಾದ ನೀವುಗಳು ದೋಷಗಳನ್ನು ದೂರಮಾಡಿ, ಗುಣಗಳನ್ನು ಮಾತ್ರ ಗ್ರಹಣ ಮಾಡಿ, ನನ್ನ ಶ್ರಮವನ್ನು ಸಾರ್ಥಕಗೊಳಿಸ ಬೇಕೆಂದು ಅಡಿಗಡಿಗೂ ಪ್ರಾರ್ಥಿಸುವೆನು.

ಇತಿ ಸಜ್ಜನ ವಿಧೇಯ,

**ಧೀ ರೇಂ ದ್ರ,**

ಪತ್ತೇದಾರ್.



